CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೨೪, ೨೦೦೪ (ಆಷಾಢ ೩, ಶಕ ವರ್ಷ ೧೯೨೬) | ಸಂಚಿಕೆ ೨೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂ: ಮಮಇ 86 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಮಮಇ 86 ಎಸ್‌ಜೆಡಿ 2004, ದಿನಾಂಕ: 28.1.2004 ರ ಅಧಿಸೂಚನೆಯ ಮೊದಲನೇ ಸಾಲಿನಲ್ಲಿ, 'ಶ್ರೀ ಎಂ. ಕೃಷ್ಣಪ್ಪ ಎಂಬುದರ ಬದಲಾಗಿ, ವೈ. ಕೃಷ್ಣಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ ಜಿಲ್ಲೆ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 549

**ENERGY SECRETARIAT**

**Sub:** Transfer of 0.6 M.W. Wind Power Capacity in favour of M/s. B.S.C. Textiles - Orders relating to.

**Read:** 1. Government Order No. DE 98 NCE 2000, dated: 10.7.2000.
2. Letter No. KRED/08/BSC/2004/742, dated: 5/7.5.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government order dated 10.7.2000 read at (1) above, sanction has been accorded for implementation of 149 M.W. capacity Wind Power Project at Chitradurga District to M/s Enecorn India Limited.

(2) Now, the Managing Director, Karnataka Renewable Energy Development Limited, Bangalore, in his letter dated: 5/7.5.2004 read at (2) above, has recommended to the Government for transfer of 0.6 M.W. Wind Power Capacity in favour of M/s. B.S.C. Textiles, at survey No. 52 of Elladakere Village of Chitradurga district, from out of the sanctioned 149 M.W. capacity of M/s Enecorn India Limited.

(3) The proposal has been examined and pass the following order:

**Government Order No. DE 160 NCE 2004, Bangalore, Dated 15th May 2004**

(4) Government are pleased to accord sanction for transfer of 0.6 M.W. Wind Power Capacity in favour of M/s. B.S.C. Textiles, in the schedule indicated below, from out of 149 M.W. capacity of M/s Enecorn India Limited, allotted in the Government Order dated: 10.7.2000.

**SCHEDULE-I**

| Taluk / District | Village Name | Survey Number | Extent of area acres / gunta |
|---|---|---|---|
| Hiriyur Chitradurga | Elladakere | 52 | 0.977 (ha) |

(5) The terms and conditions of the original allotment made in the Government order read at (1) above are **IPSOFACTO** applicable.

By order and in the name of the Governor of Karnataka,
**K.L. Jayaram**
Under Secretary to Government,
Energy Department.

PR-542

**Sub:** Transfer of 1.2 M.W. Wind Power Capacity in favour of M/s. Madras Cement Limited - Orders relating to.

**Read:** 1. Government Order No. DE 98 NCE 2000, dated: 10.7.2000.
2. Letter No. KRED/08/MCL/2004/743, dated: 5.5.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government order dated 10.7.2000 read at (1) above, sanction has been accorded for implementation of 149 M.W. capacity Wind Power Project at Chitradurga District to M/s Enecorn India Limited.

(2) Now, the Managing Director, Karnataka Renewable Energy Development Limited, Bangalore, in his letter dated: 5/7.5.2004 read at (2) above, has recommended to the Government for transfer of 1.2 M.W. Wind Power Capacity in favour of M/s Madras Cements Limited, at survey No. 52 of Elladakere Village of Chitradurga district, from out of the sanctioned 149 M.W. capacity of M/s Enecorn India Limited.

(3) The proposal has been examined and pass the following order:

**Government Order No. DE 161 NCE 2004, Bangalore, Dated 15th May 2004**

(4) Government are pleased to accord sanction for transfer of 1.2 M.W. Wind Power Capacity in favour of M/s Madras Cement Limited, in the schedule indicated below, from out of 149 M.W. capacity of M/s Enecorn India Limited, allotted in the Government Order dated: 10.7.2000.

**SCHEDULE-I**

| Taluk / District | Village Name | Survey Number | Extent of area acres / gunta |
|---|---|---|---|
| Hiriyur Chitradurga | Elladakere | 52 | 1.954 (ha) |

(5) The terms and conditions of the original allotment made in the Government order read at (1) above are **IPSOFACTO** applicable.

By order and in the name of the Governor of Karnataka,
**K.L. Jayaram**
Under Secretary to Government,
Energy Department.

PR-543

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಹಾಪ್‌ಕಾಮ್ಸ್‌ನಲ್ಲಿ ನಡೆದಿರುವ ಅವ್ಯವಹಾರದ ಬಗ್ಗೆ ಸಾರ್ವಜನಿಕ ಲೆಕ್ಕ ಸಮಿತಿ ಇವರಿಗೆ ವರದಿಯನ್ನು ಸಲ್ಲಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 112 ತೋಸೇಪ 2002, ದಿನಾಂಕ: 21.5.2002.
2) ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯ ದಿನಾಂಕ: 6.9.2003.

**ಪ್ರಸ್ತಾವನೆ:**

ತೋಟಗಾರಿಕೆ ಇಲಾಖೆಯ ಬೆಂಗಳೂರಿನಲ್ಲಿರುವ ತೋಟದ ಬೆಳೆಗಾರರ ಸಹಕಾರಿ ಮಾರಾಟ ಮತ್ತು ಸಂಸ್ಕರಣ ಸಂಘ (ನಿ) (ಹಾಪ್‌ಕಾಮ್ಸ್) ಸಂಸ್ಥೆಯಲ್ಲಿ 1995 ರಿಂದ 1998 ರ ಅವಧಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಸಾರ್ವಜನಿಕ ಲೆಕ್ಕ ಪತ್ರ ಸಮಿತಿಯು ನೀಡಿದ ವರದಿಯ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿಯಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶ್ರೀ ಗೋಪಾಲಗೌಡ, ಸಹಾಯಕ ತೋಟಗಾರಿಕೆ ನಿರ್ದೇಶಕರವರನ್ನು ಮಂಡನಾಧಿಕಾರಿಯನ್ನಾಗಿ ಕ್ರಮಾಂಕ (1) ರಲ್ಲಿ ಓದಲಾಗಿರುವ ದಿನಾಂಕ: 21.5.2002 ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

1. ಡಾ: ಡಿ.ಎಲ್. ಮಹೇಶ್ವರ್, ತೋಟಗಾರಿಕೆ ಜಂಟಿ ನಿರ್ದೇಶಕರು ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಹಾಪ್‌ಕಾಮ್ಸ್.
2. ಶ್ರೀ ಪಿ.ಎಂ. ರಾಮು, ತೋಟಗಾರಿಕೆ ಜಂಟಿ ನಿರ್ದೇಶಕರು ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಹಾಪ್‌ಕಾಮ್ಸ್.
3. ಶ್ರೀ ಎನ್. ರಾಜಣ್ಣ, ಪ್ರಧಾನ ವ್ಯವಸ್ಥಾಪಕರು (ಆಡಳಿತ) ಹಾಪ್‌ಕಾಮ್ಸ್ (ಎರವಲು ಸೇವೆ ಸಹಕಾರ ಇಲಾಖೆಯಿಂದ - ಸಹಕಾರ ಸಂಘಗಳ ಉಪ ನಿಬಂಧಕರು ಮತ್ತು ಸಹಕಾರ ಸಂಘಗಳ ನಿರೀಕ್ಷಕರು)
4. ಶ್ರೀ ಎ.ಎನ್. ಶಿವಲಿಂಗಯ್ಯ, ಕಾರ್ಯನಿರ್ವಾಹಕರು, ಹಾಪ್‌ಕಾಮ್ಸ್ (ಎರವಲು ಸೇವೆ ಸಹಕಾರ ಇಲಾಖೆಯಿಂದ - ಸಹಕಾರ ಸಂಘಗಳ ಉಪ ನಿಬಂಧಕರು ಮತ್ತು ಸಹಕಾರ ಸಂಘಗಳ ನಿರೀಕ್ಷಕರು)

ಓದಲಾಗಿರುವ ದಿನಾಂಕ: 6.9.2003 ರ ಪತ್ರದಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಈಶ್ವರ್‌ಭಟ್, ಇವರು ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ವಿಚಾರಣೆಗೆ ಗುರಿಪಡಿಸಿದ ಅಧಿಕಾರಿ / ನೌಕರರ ಮೇಲಿನ ಆರೋಪಗಳು ರುಜುವಾತಾಗಿರುವುದಿಲ್ಲ ಎಂದು ವರದಿ ಮಾಡಿದ್ದಾರೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆಪಾದಿತರ ಮೇಲಿನ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗದಿರುವುದರಿಂದ ಇವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ತೀರ್ಮಾನಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 112 ತೋಸೇಪ 2002, ಬೆಂಗಳೂರು, ದಿನಾಂಕ: 27ನೇ ಮೇ 2004**

ಬೆಂಗಳೂರು ತೋಟದ ಬೆಳೆಗಾರರ ಸಹಕಾರ ಮಾರಾಟ ಮತ್ತು ಸಂಸ್ಕರಣಾ ಸಂಘ (ಹಾಪ್‌ಕಾಮ್ಸ್) ಈ ಸಂಸ್ಥೆಯಲ್ಲಿ 1995 ರಿಂದ 1998 ರ ಅವಧಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿಯ ನಿರ್ಣಯದ ಮೇರೆಗೆ ಕೆಳಕಂಡ ಅಧಿಕಾರಿಗಳನ್ನು ಅವರ ಮೇಲಿನ ಆರೋಪಗಳಿಂದ ಮುಕ್ತರನ್ನಾಗಿ ಮಾಡಿ ಆದೇಶಿಸಿದೆ.

1. ಡಾ: ಡಿ.ಎಲ್. ಮಹೇಶ್ವರ್, ತೋಟಗಾರಿಕೆ ಜಂಟಿ ನಿರ್ದೇಶಕರು, ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಹಾಪ್‌ಕಾಮ್ಸ್.
2. ಶ್ರೀ ಪಿ.ಎಂ. ರಾಮು, ತೋಟಗಾರಿಕೆ ಜಂಟಿ ನಿರ್ದೇಶಕರು, ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಹಾಪ್‌ಕಾಮ್ಸ್.
3. ಶ್ರೀ ಎನ್. ರಾಜಣ್ಣ, ಸಹಕಾರ ಸಂಘಗಳ ಉಪ ನಿಬಂಧಕರು ಹಿಂದಿನ ಪ್ರಧಾನ ವ್ಯವಸ್ಥಾಪಕರು (ಆಡಳಿತ) ಹಾಪ್‌ಕಾಮ್ಸ್.
4. ಶ್ರೀ ಎ.ಎನ್. ಶಿವಲಿಂಗಯ್ಯ, ಸಹಕಾರ ಸಂಘಗಳ ನಿರೀಕ್ಷಕರು, ಹಿಂದಿನ ಕಾರ್ಯನಿರ್ವಾಹಕರು, ಹಾಪ್‌ಕಾಮ್ಸ್.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎನ್. ಮಂಜುಳಗೀತ

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 550

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ. ಕರುಣಾಕರನ್, ನಿವೃತ್ತ ದಲಾಯತ್, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರ ಪಿಂಚಣಿ ಹಣವನ್ನು ಬಿಡುಗಡೆ ಮಾಡುವ ಸಂಬಂಧ ಉಂಟಾಗಿರುವ ದೀರ್ಘಕಾಲದ ವಿಳಂಬಕ್ಕೆ ಕಾರಣರಾಗಿರುವ ಅಧಿಕಾರಿ : ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ (2): ಸಿಆರ್-89:2003-04, ದಿನಾಂಕ: 21.2.2004.
2) ಆಪಾದಿತ ಸರ್ಕಾರಿ ಅಧಿಕಾರಿ : ನೌಕರರಿಗೆ ಕಾರಣ ಕೇಳುವ ನೋಟೀಸು ದಿನಾಂಕ: 17.10.2003.
3) ಆಪಾದಿತ ಸರ್ಕಾರಿ ಅಧಿಕಾರಿ : ನೌಕರರುಗಳು ಸಲ್ಲಿಸಿರುವ ಉತ್ತರ.

**ಪ್ರಸ್ತಾವನೆ:**

ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು, ಇವರು ಮೇಲೆ ಓದಲಾದ ಉಲ್ಲೇಖ (1)ರ ಪತ್ರದಲ್ಲಿ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ಈ ಹಿಂದೆ ಸೇವೆ ಸಲ್ಲಿಸುತ್ತಿದ್ದ ಶ್ರೀ ಕೆ. ಕರುಣಾಕರನ್, ನಿವೃತ್ತ ದಲಾಯತ್ ಇವರಿಗೆ ಪಿಂಚಣಿ ಹಣವನ್ನು ಬಿಡುಗಡೆ ಮಾಡುವ ಸಂಬಂಧದಲ್ಲಿ ದೀರ್ಘಕಾಲದ ವಿಳಂಬಕ್ಕೆ ಕಾರಣರಾಗಿರುವ ಈ ಕೆಳಕಂಡ ಅಧಿಕಾರಿ : ನೌಕರ ವರ್ಗದವರ ಮೇಲೆ ಕರ್ನಾಟಕ ಸರ್ಕಾರಿ ನಾಗರೀಕ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1997ರ ನಿಯಮ 11 ಮತ್ತು 13 ರ ಅಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು 214 (2) (ಬಿ) ಗಳ ಅನ್ವಯ ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

| | | |
|---|---|---|
| 1 | ಶ್ರೀ : ವೈ.ಎಂ. ಹಳ್ಳಿಯಾಳ್<br>ಉಪ ನಿಬಂಧಕರು ಮತ್ತು ನಿಬಂಧಕರ ಪ್ರಭಾರ | ದಿನಾಂಕ: 31.5.2000 ರಂದು ನಿವೃತ್ತರಾಗಿರುತ್ತಾರೆ. |
| 2 | ಶ್ರೀ ರಂಗಧಾಮಯ್ಯ, ಸಹಾಯಕ ನಿಬಂಧಕರು, ಉಪ ನಿಬಂಧಕರ ಪ್ರಭಾರ | ದಿನಾಂಕ: 31.12.2001 ರಂದು ನಿವೃತ್ತರಾಗಿರುತ್ತಾರೆ. |
| 3 | ಶ್ರೀ ಎಸ್.ಎನ್. ಚಂದ್ರಶೇಖರಯ್ಯ ಅಧೀಕ್ಷಕರು | ದಿನಾಂಕ: 31.5.2001 ರಂದು ಸ್ವಯಂ ನಿವೃತ್ತರಾಗಿದ್ದಾರೆ |
| 4 | ಶ್ರೀ ಎನ್.ಜಿ. ನರಸಿಂಹಮೂರ್ತಿ, ಅಧೀಕ್ಷಕರು | |
| 5 | ಶ್ರೀ ಆರ್.ಎಂ. ಅಗಡಿ, ಅಧೀಕ್ಷಕರು | |
| 6 | ಶ್ರೀ ಹೆಚ್.ಕೆ. ಜಯಣ್ಣ, ಪ್ರಥಮ ದರ್ಜೆ ಸಹಾಯಕರು | |

ಮೇಲ್ಕಂಡ ಆರು ಜನ ಅಧಿಕಾರಿ : ನೌಕರರುಗಳಿಗೆ ದೋಷಾರೋಪಣೆ ಪಟ್ಟಿ ಹಾಗೂ ಸೂಚನಾ ಪತ್ರಗಳನ್ನೊಳಗೊಂಡ ಕಾರಣ ಕೇಳುವ ನೋಟೀಸ್‌ಗಳನ್ನು ಮೇಲೆ ಓದಲಾದ ಉಲ್ಲೇಖ (2) ರಲ್ಲಿ ಓದಲಾದ ಪತ್ರದನ್ವಯ ಜಾರಿ ಮಾಡಲಾಗಿದ್ದು ಆಪಾದಿತ ಅಧಿಕಾರಿಗಳು ಹಾಗೂ ನೌಕರರುಗಳು ಮೇಲೆ ಓದಲಾದ ಉಲ್ಲೇಖ (3) ರ ಅನುಸಾರ ಉತ್ತರಗಳನ್ನು ಸಲ್ಲಿಸಿ ಅವರ ಮೇಲಿನ ದೋಷಾರೋಪಣೆಗಳನ್ನು ನಿರಾಕರಿಸಿರುತ್ತಾರೆಂದು ನಿಬಂಧಕರು ವರದಿ ಮಾಡಿರುತ್ತಾರೆ.

ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಅಧಿಕಾರಿ : ನೌಕರರುಗಳು ಇದೇ ನ್ಯಾಯಾಧಿಕರಣದ ನಿವೃತ್ತ ದಲಾಯತ್ ರವರ ಪಿಂಚಣಿ ಹಣವನ್ನು ಬಿಡುಗಡೆ ಮಾಡುವಲ್ಲಿ

ಉಂಟು ಮಾಡಿರುವ ದೀರ್ಘ ಕಾಲದ ವಿಳಂಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಈ ಪ್ರಕರಣದಲ್ಲಿನ ಸತ್ಯಾಂಶವನ್ನು ತಿಳಿಯಲು ಜಂಟಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಕಂಡುಬಂದಿರುತ್ತದೆ.

ನಿಬಂಧಕರ ಪ್ರಸ್ತಾವನೆಯನ್ನು ಸರ್ಕಾರವು ಒಪ್ಪಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 7 ಆರ್‌ಎಂ೩ 2003, ಬೆಂಗಳೂರು, ದಿನಾಂಕ: 26ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(2)(ಬಿ)(111) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ಮತ್ತು 13 ರಡಿಯಲ್ಲಿ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಕೆಳಕಂಡ ಅಧಿಕಾರಿಗಳು : ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ.

| | | |
|---|---|---|
| 1 | ಶ್ರೀ : ವೈ.ಎಂ. ಹಳ್ಳಿಯಾಳ್ ಉಪ ನಿಬಂಧಕರು ಮತ್ತು ನಿಬಂಧಕರ ಪ್ರಭಾರ | ದಿನಾಂಕ: 31.5.2000 ರಂದು ನಿವೃತ್ತರಾಗಿರುತ್ತಾರೆ. |
| 2 | ಶ್ರೀ ರಂಗಧಾಮಯ್ಯ, ಸಹಾಯಕ ನಿಬಂಧಕರು, ಉಪ ನಿಬಂಧಕರ ಪ್ರಭಾರ | ದಿನಾಂಕ: 31.12.2001 ರಂದು ನಿವೃತ್ತರಾಗಿರುತ್ತಾರೆ. |
| 3 | ಶ್ರೀ ಎಸ್.ಎನ್. ಚಂದ್ರಶೇಖರಯ್ಯ | ದಿನಾಂಕ: 31.5.2001 ರಂದು ಸ್ವಯಂ ನಿವೃತ್ತರಾಗಿದ್ದಾರೆ |
| 4 | ಶ್ರೀ ಎನ್.ಜಿ. ನರಸಿಂಹಮೂರ್ತಿ, ಅಧೀಕ್ಷಕರು | |
| 5 | ಶ್ರೀ ಆರ್.ಎಂ. ಅಗಡಿ, ಅಧೀಕ್ಷಕರು | |
| 6 | ಶ್ರೀ ಹೆಚ್.ಕೆ. ಜಯಣ್ಣ, ಪ್ರಥಮ ದರ್ಜೆ ಸಹಾಯಕರು | |

ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ. 2211, ಹೆಚ್.ಎ.ಎಲ್. 3ನೇ ಹಂತ, 80 ಅಡಿ ರಸ್ತೆ, ಕೋಡಿಹಳ್ಳಿ ಕ್ರಾಸ್, ಬೆಂಗಳೂರು-560 008 ಇವರನ್ನು ಪ್ರಕರಣದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಜಂಟಿ ಇಲಾಖಾ ವಿಚಾರಣೆಯನ್ನು ಮುಂದಿನ ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವಿಚಾರಣಾ ವರದಿ ಮತ್ತು ಸಂಬಂಧಪಟ್ಟ ಅಭಿಲೇಖನಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ (2) (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ.ಎಲ್. ಕುಂದರಗಿ, ಸಹಾಯಕ ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣೆ ನಡೆಸುವ ಸಲುವಾಗಿ ವಿಚಾರಣಾಧಿಕಾರಿಗಳಿಗೆ ಅವಶ್ಯವಿರುವ ಕೊಠಡಿ, ಶೀಘ್ರಲಿಪಿಗಾರರು : ಬೆರಳಚ್ಚುಗಾರರು, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸುವಂತೆ ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಇವರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಬಿ. ಬೆಳಗಾವಿ**

ಪಿ.ಆರ್. 553

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಂದಾಯ ಇಲಾಖೆ (ಕೆ.ಎ.ಟಿ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂಕಇ 38 ರಾಪಸಿ 2003, ಬೆಂಗಳೂರು, ದಿನಾಂಕ: 13ನೇ ಮೇ 2004**

ಕರ್ನಾಟಕ ಲೋಕಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು, (ನೇರನೇಮಕಾತಿ ಮೂಲಕ ಆಯ್ಕೆ) ನಿಯಮ 1973ರ ನಿಯಮ 7ರ ಅನ್ವಯ ದಿನಾಂಕ: 28.10.2003 ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 02 ಆರ್‌ಟಿಬಿ 97 ರಲ್ಲಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿ ಪ್ರಕಟಿಸಿರುವ ಕೆಳಕಂಡ ಅಭ್ಯರ್ಥಿಯನ್ನು 'ಬಿ' ಸಮೂಹದ ವೇತನ ಶ್ರೇಣಿ ರೂ. 6000-150-7200-200-8800-260-10880-320-11200 ರಲ್ಲಿ ಗ್ರಂಥಪಾಲಕರನ್ನಾಗಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಪರೀಕ್ಷಾರ್ಥವಾಗಿ ನೇಮಕ ಮಾಡಲಾಗಿದೆ.

ಶ್ರೀಮತಿ ನಳಿನಿ ಗುರುರಾಜ್

74, ಉನ್ನತಿ ಮೌಂಟನ್ ರಸ್ತೆ, 1ನೇ ಬ್ಲಾಕ್, ಪೂರ್ವ, ಜಯನಗರ, ಬೆಂಗಳೂರು-560 001

ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿನ ಅರ್ಜಿ ಸಂಖ್ಯೆ: 3534:1998 ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಸದರಿಯವರ ನೇಮಕಾತಿ ಮತ್ತು ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಹಾಗೂ ಮುಂದೆ ಹೊರಡಿಸಬಹುದಾದ ನಿಯಮಗಳಿಗೆ ಮತ್ತು ಆದೇಶಗಳಿಗೆ ಒಳಪಟ್ಟಿರುತ್ತದೆ.

ಗ್ರಂಥಪಾಲಕರ ಹುದ್ದೆಗೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಪರೀಕ್ಷಾರ್ಥಿಯಾಗಿರುತ್ತಾರೆ. ಪರೀಕ್ಷಾರ್ಥ ಅವಧಿಯಲ್ಲಿ ಇವರ ನೇಮಕಾತಿಯು 1972ರ ಕರ್ನಾಟಕ ನಾಗರೀಕ ಸೇವಾ (ಪರಿಕ್ಷಾರ್ಥ) ನಿಯಮಾವಳಿ ಹಾಗೂ ಕಾಲಕಾಲಕ್ಕೆ ಜಾರಿಯಲ್ಲಿರುವ ಸಂಬಂಧಪಟ್ಟ ಇತರ ನಿಯಮಾವಳಿಗಳು ಮತ್ತು ಆದೇಶಗಳಿಗನುಗುಣವಾಗಿರುತ್ತದೆ. ಪರೀಕ್ಷಾರ್ಥ ಅವಧಿಯಲ್ಲಿ 1974ರ

ಕರ್ನಾಟಕ ನಾಗರೀಕ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಗ್ರಂಥಪಾಲಕರಿಗೆ ನಿಗದಿಪಡಿಸಿರುವ ಇಲಾಖಾ ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.

ಈ ಆದೇಶ ತಲುಪಿದ 15 ದಿನಗಳ ಒಳಗಾಗಿ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ವಿಧಾನ ಸೌಧ, ಇವರಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಕೆಳಕಂಡ ದಾಖಲೆಗಳನ್ನು ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರಿಗೆ ಹಾಜರುಪಡಿಸತಕ್ಕದ್ದು.

1. ಅರ್ಹತಾ ವಯಸ್ಸಿನ ಪೂರಕವಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಪ್ರಮಾಣ ಪತ್ರದ ಮೂಲ ಪ್ರಮಾಣ ಪತ್ರ.
2. ವಿದ್ಯಾರ್ಹತೆ ಇತ್ಯಾದಿಗಳಿಗೆ ಪೂರಕವಾಗಿ ಅವಶ್ಯಕ ಪದವಿಗಳ ಮೂಲ ಪ್ರಮಾಣ ಪತ್ರಗಳು.
3. ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡೆತೆ ಪ್ರಮಾಣ ಪತ್ರಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 555

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ.336.ಡಿಸಿಇ.96, ದಿನಾಂಕ: 24.2.97.
2) ಸರ್ಕಾರಿ ಆದೇಶ ಸಂಖ್ಯೆ: ಇಡಿ.180.ಡಿಸಿಇ.96, ದಿನಾಂಕ: 2.6.2000.
3) ಸರ್ಕಾರಿ ಆದೇಶ ಸಂಖ್ಯೆ: ಇಡಿ.322.ಡಿಸಿಇ.2001, ದಿನಾಂಕ: 15.1.2002.
4) ಸರ್ಕಾರಿ ಆದೇಶ ಸಂಖ್ಯೆ: ಇಡಿ.223.ಡಿಸಿಇ.2003, ದಿನಾಂಕ: 22.2.2003.
5) ಪತ್ರ ಸಂಖ್ಯೆ: ಸಿಸಿಇ.01.ಇಎಪಿ.97, ಸಿವಿ-1, ದಿನಾಂಕ: 17.5.2004, ಕಾಲೇಜು ಶಿಕ್ಷಣ ಆಯುಕ್ತರಿಂದ.

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯ ಆಡಳಿತವನ್ನು ಬಲಪಡಿಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯೊಂದನ್ನು ದಿನಾಂಕ: 1.1.97 ರಿಂದ ಜಾರಿಗೆ ಬರುವಂತೆ 3 ವರ್ಷಗಳ ಅವಧಿಗೆ ಪ್ರಯೋಗಾತ್ಮಕವಾಗಿ ಸೃಜಿಸಲಾಗಿದೆ. ಹಾಗೂ ಸದರಿ ಹುದ್ದೆಯನ್ನು ಭಾರತ ಆಡಳಿತ ಸೇವೆಯ ಸೂಪರ್ ಟೈಮ್ ವೇತನ ಶ್ರೇಣಿಯ ಅಧಿಕಾರಿ ವೃಂದದಿಂದ ತುಂಬಬೇಕೆಂದು ಆದೇಶಿಸಲಾಗಿದೆ.

ಮೇಲೆ (2) ರಿಂದ (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯನ್ನು ಕಾಲಕಾಲಕ್ಕೆ ದಿನಾಂಕ: 31.12.2003 ರವರೆಗೆ ಮುಂದುವರಿಸಲಾಗಿತ್ತು.

ಮೇಲೆ (5) ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯ ಅವಧಿಯು 31.12.2003 ಕ್ಕೆ ಮುಕ್ತಾಯಗೊಳ್ಳುವುದರಿಂದ, ಸದರಿ ಹುದ್ದೆಯನ್ನು ಪುನಃ ದಿನಾಂಕ: 1.1.2004 ಮುಂದಿನ ಆದೇಶದವರೆವಿಗೆ ಮುಂದುವರೆಸಲು ಆದೇಶ ಕೋರಿದ್ದಾರೆ.

ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಶೈಕ್ಷಣಿಕ ಪ್ರಗತಿ ಸಾಧಿಸಲು ಹಾಗೂ ಆಡಳಿತಾತ್ಮಕ ಕಾರ್ಯಭಾರವನ್ನು ಉತ್ತಮಪಡಿಸಲು ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯನ್ನು ಮುಂದುವರೆಸುವುದು ಅವಶ್ಯಕವಾಗಿದೆ ಎಂಬುದನ್ನು ಸರ್ಕಾರವು ಪರಿಶೀಲಿಸಿ ದಿನಾಂಕ: 1.1.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಇಡಿ 96 ಡಿಸಿಇ 2004, ಬೆಂಗಳೂರು, ದಿನಾಂಕ: 26ನೇ ಮೇ 2004

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕಾಲೇಜು ಶಿಕ್ಷಣ ಆಯುಕ್ತರ ಹುದ್ದೆಯನ್ನು ದಿನಾಂಕ: 1.1.2004 ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಈ ಹುದ್ದೆಯನ್ನು ಭಾರತ ಆಡಳಿತ ಸೇವೆಯ ಸೂಪರ್ ಟೈಮ್ ವೇತನ ಶ್ರೇಣಿ (22,400-525-24500) ಹೊಂದಿದ ಅಧಿಕಾರಿಗಿಂತ ಮೇಲ್ಪಟ್ಟ ಅಧಿಕಾರಿಯಿಂದ ತುಂಬತಕ್ಕದ್ದು.

ಸರ್ಕಾರಕ್ಕೆ ತಗಲುವ ವೆಚ್ಚವನ್ನು ಕಾಲೇಜು ಶಿಕ್ಷಣ ಇಲಾಖೆಗೆ ಒದಗಿಸಿರುವ ಲೆಕ್ಕ ಶೀರ್ಷಿಕೆ 2202-03-001-0-01 ಯೋಜನೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ-52-ಸೇಅಸೇ-2004, ದಿನಾಂಕ: 25.5.2004 ರಲ್ಲಿ ನೀಡಿರುವ ಸಹಮತಿಯನ್ವಯ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ-1-ಟಿಎಫ್‌ಪಿ-96 ದಿನಾಂಕ: 10.7.96 ರಡಿಯಲ್ಲಿ ಆಡಳಿತ ಇಲಾಖೆ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 556

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ-ಆಲೂರು ಸಂಘಕ್ಕೆ ನೇಮಕ ಮಾಡಿದ್ದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಣೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 54 ಮುನೋಸೊ 99, ದಿನಾಂಕ: 11.10.2001.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 54 ಮುನೋಸೊ 99, ದಿನಾಂಕ: 15.11.2003.
3) ಉಪವಿಭಾಗಾಧಿಕಾರಿ, ಗದಗ್ : ಆಡಳಿತಾಧಿಕಾರಿ, ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಇವರ ಅ.ಸ. ಪತ್ರ ಸಂಖ್ಯೆ: ಕೆಎಸ್‌ಪಿಎಸ್/2003-04, ದಿನಾಂಕ: 17/20.3.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಿನಾಂಕ: 11.10.2001 ರಂದು ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ-ಆಲೂರು, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿ, ಉಪ ವಿಭಾಗಾಧಿಕಾರಿಗಳು, ಗದಗ್ ಇವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸರಿದಾರಿಗೆ ತರುವ ಬಗ್ಗೆ ನಿರೀಕ್ಷಿತ ಬೆಳವಣಿಗೆ ಉಂಟಾಗದಿದ್ದ ಕಾರಣ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗುತ್ತಿದೆ. ಅಂತೆಯೇ ಮೇಲೆ ಓದಲಾದ (2)ರ ಆದೇಶದ ದಿನಾಂಕದಲ್ಲಿ ಆಡಳಿತಾಧಿಕಾರಿಯವರ ಅವಧಿಯನ್ನು 6 ತಿಂಗಳ ಅವಧಿಗೆ ವಿಸ್ತರಿಸಿದ್ದು, ದಿನಾಂಕ: 10.4.2004ಕ್ಕೆ ಅವಧಿಯು ಮುಗಿದು ಹೋಗಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಉಪ ವಿಭಾಗಾಧಿಕಾರಿ, ಗದಗ್ ಮತ್ತು ಆಡಳಿತಾಧಿಕಾರಿ, ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ ಹೊಳೆ ಆಲೂರು, ಇವರು ಸಮಿತಿಗೆ ಸಂಬಂಧಿಸಿದಂತೆ ಶ್ರೀ ಬಿ.ಎಂ. ಕಟ್ಟಿ, ಪ್ರಾಚಾರ್ಯರು, ಇವರನ್ನು ಸೇವೆಯಿಂದ ವಜಾ ಮಾಡಿದ ಬಗ್ಗೆ ಪ್ರಕರಣವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿದ್ದುದರಿಂದ, ಆಡಳಿತಾತ್ಮಕ ದೃಷ್ಟಿಯಿಂದಾಗಿ ಆಡಳಿತ ಮಂಡಳಿಯನ್ನು ರಚಿಸುವ ಬಗ್ಗೆ ಸರ್ವ ಸಾದಾರಣ ಸಮಿತಿಯ ಸಭೆಯನ್ನು ಕರೆಯುವುದರಲ್ಲಿ ವಿಳಂಬ ಮಾಡಲಾಗಿತ್ತು. ಈಗ ಪ್ರಕರಣವು ಮಾನ್ಯ ಸರ್ವೋಚ್ಚ ನ್ಯಾಯಾಲಯದಿಂದ ವಜಾ ಆಗಿರುವುದರಿಂದ, ಸಮಿತಿಗೆ ಆಡಳಿತ ಮಂಡಳಿ ರಚಿಸುವ ಬಗ್ಗೆ ಬೇಗನೆ ಕ್ರಮ ಜರುಗಿಸಲಾಗುವುದೆಂದು ವರದಿ ಮಾಡಿರುತ್ತಾರೆ.

ಆಡಳಿತಾಧಿಕಾರಿಯವರ ವರದಿಯನ್ನು ಪರಿಶೀಲಿಸಿ, ಸರ್ಕಾರವು ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 11.4.2004 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 58 ಮುನೋಸೊ 2003, ಬೆಂಗಳೂರು, ದಿನಾಂಕ: 21ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27(ಎ) ಪ್ರಕಾರ, ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ ಆಲೂರು, ಈ ಸಂಘಕ್ಕೆ ನೇಮಕ ಮಾಡಲಾಗಿದ್ದ, ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 11.4.2004 ರಿಂದ 6 ತಿಂಗಳ ಅವಧಿಗೆ ಅಥವಾ ಸಮಿತಿಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 561

**ಎಸ್.ಜಿ. ನಾರಾಯಣ**
ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2004-2005ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ರಾಜ್ಯದ ಪಾಲಿನ ಹಣವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ. 25 ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 17014 : 12 : 2004 ಡಿಆರ್‌ಡಿಎ (ಎಸ್‌ಆರ್ ನಂ. 20) ದಿನಾಂಕ: 28.4.2004.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2004-05ನೇ ಸಾಲಿಗೆ ಒಂದನೇ ಕಂತಿನ ಹಣ ರೂ. 510.68 ಲಕ್ಷವನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಇದಕ್ಕನುಗುಣವಾಗಿ ರೂ. 170.23 ಲಕ್ಷ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 22ನೇ ಮೇ 2004**

ರಾಜ್ಯ ಸರ್ಕಾರವು ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಆಡಳಿತ ವೆಚ್ಚಕ್ಕಾಗಿ ಒಂದನೇ ಕಂತಿನ ಹಣ ರೂ. 170.23 ಲಕ್ಷಗಳನ್ನು (ರೂ. ಒಂದು ನೂರ ಎಪ್ಪತ್ತು ಲಕ್ಷದ ಇಪ್ಪತ್ತ ಮೂರು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. (ಅನುಬಂಧ ಲಗತ್ತಿಸಿದೆ)

1999 ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ. ಎರಡನೇ ಕಂತಿನ ಹಣವನ್ನು ಲಭ್ಯವಿರುವ ಹಣದ ಶೇ. 60 ರಷ್ಟು ಖರ್ಚು ಮಾಡಿದ ನಂತರವೇ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201).

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 160 ಪಿಬಿಎಸ್ 2004 ದಿನಾಂಕ: 17.5.2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ. 147/03 ದಿನಾಂಕ: 18.5.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಶಾಮಭಟ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಡಿಆರ್‌ಡಿಎ ಆಡಳಿತ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 22ನೇ ಮೇ 2004ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಬಿಡುಗಡೆ ಆಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ |
|---|---|---|---|
| 1. | ಬೆಂಗಳೂರು ನಗರ | 16.38 | 5.46 |
| 2. | ಬೆಂಗಳೂರು ಗ್ರಾ | 20.30 | 6.77 |
| 3. | ಬಾಗಲಕೋಟೆ | 20.30 | 6.77 |
| 4. | ಬೆಳಗಾಂ | 20.30 | 6.77 |
| 5. | ಬಳ್ಳಾರಿ | 20.30 | 6.77 |
| 6. | ಬೀದರ್ | 16.38 | 5.46 |
| 7. | ಬಿಜಾಪುರ | 16.38 | 5.46 |
| 8. | ಚಾಮರಾಜನಗರ | 16.38 | 5.46 |
| 9. | ಚಿಕ್ಕಮಗಳೂರು | 20.30 | 6.77 |
| 10. | ಚಿತ್ರದುರ್ಗ | 20.30 | 6.77 |
| 11. | ದಾವಣಗೆರೆ | 20.30 | 6.77 |
| 12. | ದಕ್ಷಿಣ ಕನ್ನಡ | 16.38 | 5.46 |
| 13. | ಧಾರವಾಡ | 16.38 | 5.46 |
| 14. | ಗದಗ್ | 16.38 | 5.46 |
| 15. | ಗುಲ್ಬರ್ಗಾ | 20.30 | 6.77 |
| 16. | ಹಾಸನ | 20.30 | 6.70 |
| 17. | ಹಾವೇರಿ | 20.30 | 6.77 |
| 18. | ಕೊಡಗು | 16.38 | 5.46 |
| 19. | ಕೋಲಾರ | 23.15 | 7.73 |
| 20. | ಕೊಪ್ಪಳ | 16.38 | 5.46 |
| 21. | ಮಂಡ್ಯ | 20.30 | 6.77 |
| 22. | ಮೈಸೂರು | 20.30 | 6.77 |
| 23. | ರಾಯಚೂರು | 20.30 | 6.77 |
| 24. | ಶಿವಮೊಗ್ಗ | 20.30 | 6.77 |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಬಿಡುಗಡೆ ಆಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ |
|---|---|---|---|
| 25. | ತುಮಕೂರು | 16.38 | 5.46 |
| 26. | ಉಡುಪಿ | 16.38 | 5.46 |
| 27. | ಉತ್ತರಕನ್ನಡ | 23.15 | 7.73 |
| | ಒಟ್ಟು | 510.68 | 170.23 |

**ಟಿ. ಶಾಮಭಟ್**

ಪಿ.ಆರ್. 562

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಹುದ್ದೆಯನ್ನು ಐ.ಎ.ಎಸ್. ನ ಸೂಪರ್ ಟೈಂ ವೇತನ ಶ್ರೇಣಿಗೆ ನಿಗದಿಪಡಿಸಿ ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ಡಿಪಿಎಆರ್/1/ಎಸ್ಎಎಸ್/2003(22) ದಿ: 1.7.2003.

2) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-1) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ/1/ಸೆಅಸೆ/2003, ದಿ: 9.3.2004.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದನ್ವಯ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರ ಹುದ್ದೆಯನ್ನು ಐ.ಎ.ಎಸ್. (ವೇತನ) ನಿಯಮಗಳು 1954ರ ನಿಯಮ 9ರನ್ವಯ ಐ.ಎ.ಎಸ್. ಸೂಪರ್ ಟೈಂ ವೇತನ ಶ್ರೇಣಿಗೆ ಸಮಾನಂತರಗೊಳಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿರುವಂತೆ ಶ್ರೀ ಕೆ.ಎಸ್. ಮಂಜುನಾಥ್ ಐ.ಎ.ಎಸ್. ಇವರನ್ನು ಧಾರ್ಮಿಕ ಮತ್ತು ದತ್ತಿ ಇಲಾಖೆಯ ಆಯುಕ್ತರನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುವುದರಿಂದ ಈ ಅಧಿಕಾರಿಯು ಐ.ಎ.ಎಸ್. ಸೂಪರ್ ಟೈಂ ದರ್ಜೆಯ ಅಧಿಕಾರಿಯಾಗಿರುವುದರಿಂದ ಐ.ಎ.ಎಸ್. ವೃಂದದಲ್ಲಿ ರೂ. 18400-500-22400 ಸೂಪರ್ ಟೈಂ ವೇತನ ಶ್ರೇಣಿಯಲ್ಲಿ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, ಬೆಂಗಳೂರು ಈ ಹುದ್ದೆಯನ್ನು ಸೃಜಿಸಲು ಕೋರಲಾಗಿರುತ್ತದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 102 ಮುಸೇವಿ 2004, ಬೆಂಗಳೂರು, ದಿನಾಂಕ: 19ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿರುವಂತೆ ಶ್ರೀ ಕೆ.ಎಸ್. ಮಂಜುನಾಥ್ ಐ.ಎ.ಎಸ್. ರವರು ಧಾರ್ಮಿಕ ದತ್ತಿ ಆಯುಕ್ತರ ಹುದ್ದೆಗೆ ವರದಿ ಮಾಡಿಕೊಂಡ ದಿ: 7.7.2003 ರಿಂದ ಸದರಿ ಹುದ್ದೆಯಲ್ಲಿ ಮುಂದುವರೆಯುವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಹುದ್ದೆಯನ್ನು ಐ.ಎ.ಎಸ್. ವೃಂದದ ರೂ. 18400-500-22400 ಸೂಪರ್ ಟೈಮ್ ವೇತನ ಶ್ರೇಣಿಯಲ್ಲಿ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, ಬೆಂಗಳೂರು ಎಂದು ಪರಿಗಣಿಸಿ ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ/430/ವೆಚ್ಚ-7/2004, ದಿನಾಂಕ: 12.5.2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 563

**ಸಿ. ಸರೋಜ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್ ಈ ಸಂಸ್ಥೆಗೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುನೋಸೊ 2002, ದಿನಾಂಕ: 11.4.2003.

**ಪ್ರಸ್ತಾವನೆ:**

ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್, ಆರ್.ಟಿ. ನಗರ, ಬೆಂಗಳೂರು ಈ ಸಂಸ್ಥೆಯು ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 11, 12 ಮತ್ತು 13 ಗಳನ್ನು ಉಲ್ಲಂಘನೆ ಮಾಡಿದ್ದರಿಂದ ಸಂಸ್ಥೆಗೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ನಂತರ ಕಾಲ ಕಾಲಕ್ಕೆ ಆಡಳಿತಾಧಿಕಾರಿ ಅವಧಿ ವಿಸ್ತರಿಸಿಕೊಂಡು ಬರಲಾಗಿದ್ದು, ಈಗ ಆಡಳಿತಾಧಿಕಾರಿ ಅವಧಿಯು ದಿನಾಂಕ: 10.4.2004 ಕ್ಕೆ ಕೊನೆಗೊಂಡಿದ್ದು, ಸರಕಾರವು ಆಡಳಿತಾಧಿಕಾರಿ ಅವಧಿ ವಿಸ್ತರಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 54 ಮುನೋಸೊ 2003, ಬೆಂಗಳೂರು, ದಿನಾಂಕ: 17ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್, ರಾಮಯ್ಯ ಗಾರ್ಡನ್, ಗಣೇಶ ಬ್ಲಾಕ್, ದಿಣ್ಣೂರು ಮುಖ್ಯರಸ್ತೆ, ಆರ್.ಟಿ. ನಗರ, ಬೆಂಗಳೂರು-32, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 11.4.2004 ರಿಂದ 6 ತಿಂಗಳ ಅವಧಿಗೆ

ವಿಸ್ತರಿಸಲಾಗಿದೆ. ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 564

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ರಮೇಶ್ ಪಿ. ಭರಸ್ಕಳೆ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ, ಇವರ ಪತ್ರದ ಸಂ: ಜಿಪಂ/ಮಮಕ/ಸಿಬ್ಬಂದಿ/ಸಿಆರ್/97/03-04, ದಿನಾಂಕ: 23.4.2004.
2) ಸರ್ಕಾರಿ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2003, ದಿ: 7.5.2004.
3) ಶ್ರೀ ರಮೇಶ್ ಭರಸ್ಕಳೆ ಇವರ ದಿ: 20.5.2004 ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 23.4.2004 ರ ಪತ್ರದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಜಿಲ್ಲೆ, ಇವರು ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ, ಇವರ ವಿರುದ್ಧ ಅನೇಕ ಆರೋಪಗಳನ್ನು ಸರ್ಕಾರಕ್ಕೆ ಸಲ್ಲಿಸಿ ಶ್ರೀಯುತರನ್ನು ಅಮಾನತ್ತಿನಲ್ಲಿಡಲು ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 7.5.2004 ರ ಆದೇಶದಲ್ಲಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರ ಮೇಲಿನ ಆರೋಪಗಳನ್ನು ವಿವರವಾಗಿ ಪರಿಶೀಲಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (3) ದಿ: 20.5.2004 ರಲ್ಲಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮಮಅಇ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಇವರ ಮೇಲಿನ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುತ್ತಾ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ.

ಶ್ರೀ ರಮೇಶ್ ಪಿ. ಭರಸ್ಕಳೆ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ. ಇವರು ದಿ: 20.5.2004 ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯನ್ನು ವಿವರವಾಗಿ ಪರಿಶೀಲಿಸಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಸೇವೆಗೆ ಪುನರ್ ಸ್ಥಾಪಿಸುವ ಕುರಿತು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 26ನೇ ಮೇ 2004

ಮೇಲೆ ವಿವರಿಸಿದ ಸಂದರ್ಭದಲ್ಲಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ, ಪ್ರಸ್ತುತ ಅಮಾನತ್ತಿನಲ್ಲಿರುವ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನಾಲಯದಲ್ಲಿ ಖಾಲಿ ಇರುವ ಉಪ ನಿರ್ದೇಶಕರು (ಸುಧಾರಣೆ) ಈ ಹುದ್ದೆಗೆ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 565

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಆದೇಶ

### ಸಂಖ್ಯೆ: ಆಕುಕ 336 ಹೆಚ್‌ಎಸ್‌ಹೆಚ್ 2004, ಬೆಂಗಳೂರು, ದಿನಾಂಕ: 26ನೇ ಮೇ 2004

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 336 ಹೆಚ್‌ಎಸ್‌ಹೆಚ್ 2004, ದಿನಾಂಕ: 17.5.2004 ರ ಅನುಬಂಧದಲ್ಲಿನ ಕ್ರಮ ಸಂಖ್ಯೆ: 44 ರಲ್ಲಿ ಡಾ: ಕೆ.ಆರ್. ಹೇಮಲತ, ಸಮುದಾಯ ಆರೋಗ್ಯ ಕೇಂದ್ರ, ಬೆಳ್ತಂಗಡಿ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕ್ರಮ ಸಂಖ್ಯೆ: 92 ರ ಡಾ: ಡಿ.ಕೆ. ನಾರಾಯಣಸ್ವಾಮಿ, ಪ್ರಾಥಮಿಕ ಆರೋಗ್ಯ ಘಟಕ, ಮಾಕಳಿ, ಇವರುಗಳಿಗೆ ಸಂಬಂಧಿಸಿದಂತೆ ಆಯ್ಕೆಯಾಗಿರುವ ವೈದ್ಯಕೀಯ ವಿದ್ಯಾಲಯ ಭಾಗದಲ್ಲಿ "ಕೆ.ಎಂ.ಸಿ. ಮಣಿಪಾಲ" ಎಂಬುದರ ಬದಲಾಗಿ "ಕೆ.ಎಂ.ಸಿ. ಮಂಗಳೂರು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 566

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಕಾಲೇಜುಗಳ ಅಭಿವೃದ್ಧಿಗೆ ಭಾರತ ಸರ್ಕಾರವು ಮಂಜೂರು ಮಾಡಿರುವ ಹಣವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಪಾವತಿಸಲು ಆಯವ್ಯಯ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಇವರ ಪತ್ರ ಸಂಖ್ಯೆ: ಭಾವೈಪ : 10 : ಬಿಯುಡಿ (1) : 2004-2005, ದಿನಾಂಕ: 24.4.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರು ಭಾರತ ಸರ್ಕಾರವು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿಯ ಅಭಿವೃದ್ಧಿಗೆ ಉತ್ತೇಜನ ನೀಡಲು ಭಾರತೀಯ ವೈದ್ಯ ಪದ್ಧತಿ ಕಾಲೇಜುಗಳ ಅಭಿವೃದ್ಧಿಗಾಗಿ ಸಹಾಯಾನುಧನವನ್ನು ವಿವಿಧ ಸ್ಕೀಂಗಳಡಿ ಮಂಜೂರು ಮಾಡುತ್ತದೆ. ಪ್ರಸ್ತುತ ಭಾರತ ಸರ್ಕಾರವು ಬಿಡುಗಡೆ ಮಾಡಿದ ಅನುದಾನಗಳ ಹಣವು ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿದ್ದು, ಈ ಬಗ್ಗೆ ಆರ್ಥಿಕ ಇಲಾಖೆಯು 'ಕ್ರೆಡಿಟ್ ಕನಫರ್‌ಮೇಷನ್ ಸ್ಲಿಪ್' ನೀಡಿದೆ. ಸದರಿ ಹಣವನ್ನು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕಾಗಿರುವುದಾಗಿ ನಿರ್ದೇಶಕರು ತಿಳಿಸಿ, ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿರುವ ಹಣದ ವಿವರ ಕೆಳಗಿನಂತೆ ದಾಖಲಿಸಲಾಗಿದೆ.

| ಕ್ರ. ಸಂ. | ಕೇಂದ್ರ ಸರ್ಕಾರದಿಂದ ಹಣ ಬಿಡುಗಡೆ ಪತ್ರದ ವಿವರ | ಅನುದಾನ ಪಡೆದ ಸಂಸ್ಥೆ | ಅನುದಾನದ ಮೊತ್ತ ರೂ. ಲಕ್ಷಗಳಲ್ಲಿ | ಆರ್ಥಿಕ ಇಲಾಖೆಯು ಸಿ.ಸಿ. ಸ್ಲಿಪ್ ನೀಡಿದ ದಿನಾಂಕ |
|---|---|---|---|---|
| 1 | ಜಡ್ 15011/39/2003 ಇ ಅಂಡ್ ಸಿ, ದಿನಾಂಕ: 24.9.2003 | ಶ್ರೀ ಹೆಚ್.ಇ.ಎಸ್. ಆಯುರ್ವೇದ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ ರೀಸರ್ಚ್ ಸೆಂಟರ್, ಮುಕ್ತಾಪುರ, ಗುಲ್ಬರ್ಗಾ | ರೂ. 12.00 ಲಕ್ಷಗಳು | 14.11.2003 |
| 2 | ಜಡ್ 15011/40/2003 ಇ ಅಂಡ್ ಸಿ, ದಿನಾಂಕ: 4.12.2003 | ಎಸ್.ಡಿ.ಎಂ. ಆಯುರ್ವೇದಿಕ್ ವೈದ್ಯಕೀಯ ಕಾಲೇಜು, ಕುತಪಾಡಿ, ಉಡುಪಿ ಸ್ನಾತಕೋತ್ತರ ವ್ಯಾಸಂಗ ಪ್ರಾರಂಭಿಸಲು | ರೂ. 29.01 ಲಕ್ಷಗಳು | 5.1.2004 |

ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2210-05-200-0-05 ಯೋಜನೆ (ಶೇಕಡಾ 100 ಕೇಂದ್ರ ಪುರಸ್ಕೃತ) ಅಡಿಯಲ್ಲಿ ಭಾರತ ಸರ್ಕಾರ ನೀಡುವ ಅನುದಾನದ ಹಣವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಅನುವಾಗಲು ರೂ. 200.00 ಲಕ್ಷ ಅನುದಾನ ಒದಗಿಸಿಕೊಳ್ಳಲಾಗಿದೆ. ಇದರಿಂದಾಗಿ ಅನುದಾನ ಬಿಡುಗಡೆ ಮಾಡಲು ಅನುದಾನದ ಕೊರತೆ ಇರುವುದಿಲ್ಲ. ಆದ್ದರಿಂದ ಸರ್ಕಾರವು ಪ್ರಸ್ತಾವನೆಯನ್ನು ಪರಿಗಣಿಸಿ ಭಾರತ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಪಾವತಿಸಲು ಲೆಕ್ಕಶೀರ್ಷಿಕೆ 2210-05-200-0-05 ಯೋಜನೆಯಡಿಯಲ್ಲಿ ಕ್ರಮವಾಗಿ ರೂ. 12.00 ಲಕ್ಷಗಳು ಹಾಗೂ ರೂ. 29.01 ಲಕ್ಷ ಆಯವ್ಯಯ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 331 ಪಿಟಿಡಿ 2004, ಬೆಂಗಳೂರು, ದಿನಾಂಕ: 27ನೇ ಮೇ 2004**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಪ್ರಸ್ತುತ 2004-2005ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2210-05-200-0-05 ಉಪಲೆಕ್ಕಶೀರ್ಷಿಕೆ 101 ಸಹಾಯಾನುದಾನದ ಅಡಿಯಲ್ಲಿ ರೂ. 200.00 ಲಕ್ಷಗಳ ಆಯವ್ಯಯ ಒದಗಿಸಿದ್ದು ಈ ಆಯವ್ಯಯದ ಅಡಿಯಲ್ಲಿ ವೆಚ್ಚ ಭರಿಸಲು ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಕಾಲೇಜುಗಳ ಅಭಿವೃದ್ಧಿ ಯೋಜನೆಯಡಿ:

1. ಗುಲ್ಬರ್ಗಾದಲ್ಲಿರುವ ಶ್ರೀ ಹೆಚ್.ಇ.ಎಸ್. ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ರೀಸರ್ಚ್ ಸೆಂಟರ್, ಗುಲ್ಬರ್ಗಾ ಇವರಿಗೆ ರೂ. 12.00 ಲಕ್ಷಗಳು (ಹನ್ನೆರಡು ಲಕ್ಷ ರೂಪಾಯಿಗಳು ಮಾತ್ರ) ಹಾಗೂ
2. ಎಸ್.ಡಿ.ಎಂ. ಆಯುರ್ವೇದ ವೈದ್ಯಕೀಯ ಕಾಲೇಜು, ಉಡುಪಿ ಇವರಿಗೆ ರೂ. 29.01 ಲಕ್ಷಗಳನ್ನು (ಇಪ್ಪತ್ತೊಂಭತ್ತು ಲಕ್ಷದ ಒಂದು ಸಾವಿರ ರೂಪಾಯಿಗಳು ಮಾತ್ರ).

ಕೇಂದ್ರ ಸರ್ಕಾರವು ಬಿಡುಗಡೆಯಾದ ಅನುದಾನಗಳಿಗೆ ಕ್ರೆಡಿಟ್ ಕನ್‌ಫರ್‌ಮೇಷನ್ ಸ್ಲಿಪ್ ಬಂದಿರುವುದರಿಂದ ಈ ಅನುದಾನವನ್ನು ಲೆಕ್ಕಶೀರ್ಷಿಕೆ 2210-05-200-0-05 ಉಪಲೆಕ್ಕಶೀರ್ಷಿಕೆ 101 ರ ಅಡಿಯಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರಿಗೆ ಸಂಬಂಧಪಟ್ಟ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 662 ಅಆಸ 2004, ದಿನಾಂಕ: 22.5.2004 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 571

**ಚೋಮಾನಾಯಕ್. ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ/51/ಬೆಂರೂಪ್ರಾ/2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2004

1987ನೇ ಕರ್ನಾಟಕ ನಗರಾಭಿವೃದ್ಧಿ ಅಧಿನಿಯಮ 9(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ನಿರ್ದಿಷ್ಟಪಡಿಸಿರುವ ಆಸ್ತಿಯನ್ನು ಸ್ವಲ್ಪ ಹೆಚ್ಚು ಕಡಿಮೆ ಆದಲ್ಲಿ ಅದೇ ಪ್ರಮಾಣದಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ವಸತಿ ಬಡಾವಣೆ ನಿರ್ಮಿಸಲು ಯೋಜನೆಗೆ ಬೇಕಾಗಿದೆ ಎಂದು ಈ ಮೂಲಕ ಘೋಷಿಸಿದೆ.

ಈ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನನ್ನು ಅವಶ್ಯವಿರುವ ಉದ್ದೇಶಕ್ಕೆ ಅಭಿವೃದ್ಧಿ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಈ ಯೋಜನೆಗೆ ಅವಶ್ಯವಿರುವ ಜಮೀನುಗಳ ನಕ್ಷೆಯನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ಶಿವಮೊಗ್ಗ ಇವರ ಕಛೇರಿಯಲ್ಲಿ ಇಡಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರನ್ನು ಭೂಸ್ವಾಧೀನ ಕಾಯಿದೆ 1894ರ ಪ್ರಕರಣ 3(ಸಿ) ಯ ಮೇರೆಗೆ ಜಿಲ್ಲಾಧಿಕಾರಿಗಳ ಕರ್ತವ್ಯವನ್ನು ನಿರ್ವಹಿಸಲು ನೇಮಕ ಮಾಡಲಾಗಿದೆ.

ಗ್ರಾಮ: ಸೋಮಿನಕೊಪ್ಪ ಹೋಬಳಿ: ಕಸಬ ತಾಲ್ಲೂಕು: ಶಿವಮೊಗ್ಗ ಜಿಲ್ಲೆ: ಶಿವಮೊಗ್ಗ

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1 | 1. ಎಸ್. ಮಲ್ಲಪ್ಪ ಬಿನ್ ನಾಗಪ್ಪ | ಎಸ್. ಮಲ್ಲಪ್ಪ | 24/1 | 6-37 | - | 6-37 | 7.68 | ಖುಷ್ಕಿ | 1-00 | 23 | 25 | 25 ಪೈಕಿ ಹಳ್ಳ | 134 |
| | 2. ಇಂದ್ರಮ್ಮ ಕೋಂ. ಕೃಷ್ಣೋಜಿರಾವ್ | ಇಂದ್ರಮ್ಮ | 24/1 | 4-37 | - | 4-37 | - | - | 4-37 | 23 | 25 | 25 ಪೈಕಿ ಹಳ್ಳ | 134 |
| | 3. ಎಸ್. ಚಂದ್ರೋಜಿರಾವ್ ಬಿನ್ ಶೇಖರಪ್ಪ | ಎಸ್.ಚಂದ್ರೋಜಿ ರಾವ್ | | | | | | | | | | | |
| | 4. ಎಸ್.ಎನ್. ಕೃಷ್ಣೋಜಿರಾವ್ | ಎಸ್.ಎನ್. ಕೃಷ್ಣೋಜಿರಾವ್ | | | | | | | | | | | |
| | 5. ಕೆ.ಜಿ. ಪಂಚಾಕ್ಷರಪ್ಪ ಬಿನ್ ಶೇಖರಪ್ಪ | ಪಂಚಾಕ್ಷರಪ್ಪ | 24/1 | 1-00 | - | 1-00 | - | - | 1-00 | 23 | 25 | 25 ಪೈಕಿ ಹಳ್ಳ | 134 |
| 2 | ಎಸ್.ಎನ್. ಕೃಷ್ಣಪ್ಪ ಬಿನ್ ನರಸಪ್ಪ | ಎಸ್.ಎನ್. ಕೃಷ್ಣಪ್ಪ | 26 | 2-08 | 0-02 | 2-16 | 2-60 | ಕೆರೆ ತರಿ | 2-16 | 25 | 36 | 35 27 | 85 |
| 3 | ಭಾರತಿ ಕೋಂ ರವಿಶಂಕರ್ | ಭಾರತಿ | 36 ಪೈಕಿ | 4-38 | - | 4-38 | 5-90 | ಖುಷ್ಕಿ | 4-38 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 4 | ಶೇಖ್ ಅಬ್ಬಾಸ್ ಬಿನ್ ಶೇಕ್ ಮಹಮದ್ | ಶೇಖ್ ಅಬ್ಬಾಸ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |
| 5 | ಮೆಹರುನ್ನೀಸಾ ಕೋಂ ಖಾಜಿ ಮಹಮದ್ ಫಯಾಜ್ | ಮೆಹರುನ್ನೀಸಾ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 6 | ವಜೀರ್ ಸಾಬ್ ಬಿನ್ ಅಹಮದ್ ಸಾಬ್ | ವಜೀರ್ ಸಾಬ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 7 | ಯಾಸೀನ್ ಬಿನ್ ಮಹಮದ್ ಗೌಸ್ | ಯಾಸೀನ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 8 | ಮಹಮದ್ ಗೌಸ್ ಬಿನ್ ಮಹಮದ್ ಹುಸೇನ್ | ಮಹಮದ್ ಗೌಸ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 9 | ಅಹಮದ್ ಖಾನ್ ಬಿನ್ ಸಾಹೇಬ್ ಖಾನ್ | ಅಹ್ಮದ್ ಖಾನ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 10 | ಸತ್ತಾರ್ ಖಾನ್ ಅಲಿಯಾಸ್ ಬಸೀರ್ ಬಿನ್ ಖಾಸಿಂ ಸಾಬ್ | ಸತ್ತಾರ್ ಖಾನ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 11 | ಅತ್ತರಬೀ ಕೋಂ ಕರೀಂ ಸಾಬ್ | ಅತ್ತರಬೀ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 12 | ಚೈನಾ ಬೀ ಕೋಂ ಪೀರಾನ್ ಸಾಬ್ | ಚೈನಾಬೀ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 13 | ಗೌಸ್ ಖಾನ್ ಬಿನ್ ಇಮಾಂ ಸಾಬ್ | ಗೌಸ್ ಖಾನ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 14 | ನವಾಜ್ ಜಾನ್ ಬಿನ್ ರಹಮಾನ್ ಸಾಬ್ | ನವಾಜ್‌ಜಾನ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 15 | ಸಾಲಿಯಮ್ಮ ಕೋಂ ಕೋಂಡಬೋವಿ | ಸಾಲಿಯಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 16 | ಲಕ್ಷ್ಮಮ್ಮ ಕೋಂ ಕೊಂಡಬೋವಿ | ಲಕ್ಷ್ಮಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |
| 17 | ರಾಮಾಬೋವಿ ಬಿನ್ ಹನುಮಂತಪ್ಪ | ರಾಮಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 18 | ದುರ್ಗಾಬೋವಿ ಬಿನ್ ದೊಡ್ಡ ದಾಸಾಬೋವಿ | ದುರ್ಗಾಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 19 | ಮರಿಯಾಬೋವಿ ಬಿನ್ ನರಸಬೋವಿ | ಮರಿಯಾಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 20 | ಮಂಜಪ್ಪ ಮೈ.ಗಾ. ಅಚ್ಚಪುಟ್ಟಮ್ಮ | ಮಂಜಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 21 | ನಾಗಮ್ಮ ಕೋಂ ನಾಗಪ್ಪ | ನಾಗಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 22 | ಲಕ್ಷ್ಮಮ್ಮ ಕೋಂ ನಂಜಾಬೋವಿ | ಲಕ್ಷ್ಮಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 23 | ಹಾಲಪ್ಪ ಬಿನ್ ತಿಮ್ಮಣ್ಣ | ಹಾಲಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 24 | ಹನುಮಂತಪ್ಪ ಬಿನ್ ಸಿದ್ದಾಬೋವಿ | ಹನುಮಂತಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 25 | ತಿರುಮಲಮ್ಮ ಕೋಂ ಹನುಮಂತಪ್ಪ ಬೋವಿ | ತಿರುಮಲಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 26 | ರಂಗಪ್ಪ ಬಿನ್ ಸಿದ್ದಾಬೋವಿ | ರಂಗಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 27 | ತಿಮ್ಮಪ್ಪ ಬಿನ್ ಸಿದ್ದಾಬೋವಿ | ತಿಮ್ಮಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 28 | ಪೂಜಾರಿ ಹನುಮಂತಪ್ಪ ಬಿನ್ ಸುಬ್ಬಣ್ಣ | ಪೂಜಾರಿ ಹನುಮಂತಪ್ಪ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |
| 29 | ಕುಮಾರ ಬೋವಿ ಬಿನ್ ಹನುಮಂತ ಬೋವಿ | ಕುಮಾರಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 30 | ಕುಮಾರಬೋವಿ ಬಿನ್ ಸಣ್ಣದಾಸ ಬೋವಿ | ಕುಮಾರಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 31 | ಹನುಮಂತ ಬೋವಿ ಬಿನ್ ದೊಡ್ಡ ದಾಸ ಬೋವಿ | ಹನುಮಂತ ಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 32 | ಸಣ್ಣ ಹನುಮಂತ ಬೋವಿ ಬಿನ್ ದೊಡ್ಡ ಹನುಮಂತ ಬೋವಿ | ಸಣ್ಣ ಹನುಮಂತ ಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 33 | ಸಣ್ಣದಾಸ ಬೋವಿ ಬಿನ್ ಹನುಮಂತ ಬೋವಿ | ಸಣ್ಣ ಹನುಮಂತ ಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 34 | ರಾಮಚಂದ್ರ ಬೋವಿ ಬಿನ್ ಹನುಮಂತ ಬೋವಿ | ರಾಮಚಂದ್ರ ಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 35 | ಲಕ್ಷ್ಮ ಬೋವಿ ಬಿನ್ ಕರಿಯಾ ಬೋವಿ | ಲಕ್ಷ್ಮಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 36 | ಬಸವರಾಜ್ ತಾಯಿ ಲಕ್ಷ್ಮಮ್ಮ | ಬಸವರಾಜ್ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 37 | ಲಕ್ಷ್ಮಬೋವಿ ಬಿನ್ ಹನುಮಾಬೋವಿ | ಲಕ್ಷ್ಮಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 38 | ಪಾಪಾಬೋವಿ ಬಿನ್ ತಿಮ್ಮಾಬೋವಿ | ಪಾಪಾಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 39 | ಕರಿಯಣ್ಣ ಬೋವಿ | ಕರಿಯಣ್ಣಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 40 | ಚಂದ್ರಪ್ಪ ಬಿನ್ ಕುಮಾರಬೋವಿ | ಚಂದ್ರಪ್ಪ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 41 | ತಿಮ್ಮಪ್ಪ ಬಿನ್ ಸಣ್ಣದಾಸಪ್ಪ | ತಿಮ್ಮಪ್ಪ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 42 | ಹನುಮಂತಪ್ಪ ಬಿನ್ ದಾಸಬೋವಿ | ಹನುಮಂತಪ್ಪ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 43 | ಕೊಂಡಬೋವಿ ಬಿನ್ ಸಣ್ಣಲಚ್ಚಬೋವಿ | ಕೊಂಡಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 44 | ತಿಮ್ಮಾಬೋವಿ ಬಿನ್ ಪಾಪಾಬೋವಿ | ತಿಮ್ಮಾಬೋವಿ | 36 ಪೈಕಿ | 2-00 | - | 2-00 | 4-00 | ಖುಷ್ಕಿ | 2-00 | ” | | | |
| 45 | ಹೆಚ್. ಹನುಮಂತಬೋವಿ ಬಿನ್ ಹನುಮಂತ ಬೋವಿ | ಹೆಚ್. ಹನುಮಂತ ಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 46 | ಡಿ. ಹನುಮಂತ ಬೋವಿ ಬಿನ್ ಹನುಮಂತ ಬೋವಿ | ಡಿ. ಹನುಮಂತ ಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 47 | ಹನುಮಕ್ಕ ಕೋಂ ಸಂಜೀವಿಬೋವಿ | ಹನುಮಕ್ಕ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 48 | ಗೌರಮ್ಮ ಕೋಂ ಉಡಸಲ ಬೋವಿ | ಗೌರಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 49 | ಗಿರಿಯಮ್ಮ ಕೋಂ ಹನುಮಂತಬೋವಿ | ಗಿರಿಯಮ್ಮ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 50 | ಅ) ಸೋಮಣ್ಣ ಬಿನ್ ಹುನುಮಂತ ಬೋವಿ | ಸೋಮಣ್ಣ 1-00 | 36 ಪೈಕಿ | 1-00 | - | 1-00 | 4-25 | ಖುಷ್ಕಿ | 1-00 | ” | | | |
| | ಆ) ರಾಮಪ್ಪ ಬಿನ್ ದುರ್ಗಾಬೋವಿ | ರಾಮಪ್ಪ 1-00 | 36 ಪೈಕಿ | 1-00 | - | 1-00 | 4-25 | ಖುಷ್ಕಿ | 1-00 | ” | | | |
| 51 | ಲಕ್ಷ್ಮಬೋವಿ ಬಿನ್ ಕೊಂಡಬೋವಿ | ಲಕ್ಷ್ಮಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |

| ಕ್ರ. ಸಂ. | ಖಾತೆದಾರರ ಹೆಸರು | ಸಾಗುವಳಿ ದಾರರ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಖರಾಬ್ | ಜಾತಾ ವಿಸ್ತೀರ್ಣ | ಆಕಾರ | ತರಹೆ | ಭೂಸ್ವಾಧೀನ ಪಡಿಸಿಕೊಳ್ಳುವ ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|---|---|---|---|---|
| | | | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 52 | ಹನುಮಕ್ಕ ಬಿನ್ ಗಿರಿಯಾಬೋವಿ | ಹನುಮಕ್ಕ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |
| 53 | ರಾಮೇನಹಳ್ಳಿ ತಿಮ್ಮಾಬೋವಿ ಬಿನ್ ಹಾಲಾಬೋವಿ | ತಿಮ್ಮಾಬೋರಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 54 | ಅನ್ವರ್‌ಸಾಬ್ ಬಿನ್ ಶೇಕ್ ಹುಸೇನ್ ಸಾಬ್ | ಅನ್ವರ್‌ಸಾಬ್ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 55 | ಗಿಡ್ಡಾಬೋವಿ ಬಿನ್ ತಿಮ್ಮಾಬೋವಿ | ಗಿಡ್ಡಾಬೋವಿ | 36 ಪೈಕಿ | 2-00 | - | 2-00 | 4-25 | ಖುಷ್ಕಿ | 2-00 | ” | | | |
| 56 | ಸಿದ್ದಾಬೋವಿ ಬಿನ್ ಸಿದ್ದಾಬೋವಿ | ಸಿದ್ದಾಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 57 | ಮೈಮುನ್ನೀಸಾ ಕೋಂ ಇಸ್ಮಾಯಿಲ್ ಸಾಬ್ | ಮೈಮುನ್ನೀಸಾ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 58 | ತಿಮ್ಮಾಬೋವಿ ಬಿನ್ ಹನುಮಂತ ಬೋವಿ | ತಿಮ್ಮಾಬೋವಿ | 36 ಪೈಕಿ | 2-00 | - | 2-00 | 4-22 | ಖುಷ್ಕಿ | 2-00 | ” | | | |
| 59 | ಅ) ಎಸ್.ಎಸ್. ಪಾಂಡು ಬಿನ್ ನರಸಪ್ಪ | ಎಸ್.ಎಸ್. ಪಾಂಡು (2-12) | 134/1 | 4-12 | - | 4-12 | 4-82 | ತರಿ | 2-12 | 134/2 | 25 | 24 | 35 |
| | ಆ) ದತ್ತೋಜಿ ಬಿನ್ ಯಲ್ಲೋಜಿ | ದತ್ತೋಜಿ (2-00) | 134/11 | 4-12 | - | 4-12 | 4-82 | ತರಿ | 2-00 | 134/2 | 25 | 24 | 35 |
| 60 | ಗೌರಮ್ಮ ಕೋಂ ಎಸ್.ಆರ್. ನರಸಪ್ಪ | ಗೌರಮ್ಮ | 134/2 | 3-18 | - | 3-18 | 3-87 | ತರಿ | 3-18 | 25 | 134/1 | 24 | 36 |
| 61 | ಎಸ್.ಎನ್. ಗಂಗಮ್ಮ ಕೋಂ. ವಿ. ರಾಜು | ಎಸ್.ಎನ್. ಗಂಗಮ್ಮ | 36/13 | 2-00 | - | 2-00 | 4-25 | ಖುಷ್ಕಿ | 2-00 | ಆಕಾರ ಬಂದು ದುರಸ್ತಿಯಾಗಿರುವುದಿಲ್ಲವಾದ್ದರಿಂದ ಚಕ್ಕುಬಂದಿ ನಮೂದಿಸಿಲ್ಲ ಹಾಗೂ ಆರ್.ಟಿ.ಸಿ. ಯಂತೆ ಹಂಗಾಮಿ ಕಂದಾಯ ನಮೂದಿಸಿರುವುದನ್ನು ಆಕಾರ ದಾಖಲಿಸಿದೆ. | | | |
| | | | | | **Total Ext** | | | | 134-01 | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 526

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## PUBLIC WORKS SECRETARIAT

**Sub:** Assigning specific road safety duties and responsibilities to the Traffic Cells of PWD.

**Ref:** 1. G.O. No. PWD 88, EAP 2002, Bangalore, dated 24-10-2002.
2. Aide-Memoire of the KSHIP Mid Term Review Supervision Mission of the World Bank.
3. The note of the Advisor, IDS Cell, dated 29-3-2004 & 6-4-2004.

**PREAMBLE:**

In the G.O. cited at (1) above, two Traffic Cells with one Assistant Executive Engineer and one Assistant Engineer have been established in the Offices of the Chief Engineer, C & B (South and North). The two Cells are already functioning. In the Government Order the following broad work has been assigned to the two Traffic Cells:

1. Improving the accident-prone spots.
2. Accident Analysis System
3. Integrated check post.

The World Bank vide the Item-54 of the Aide-Memoire cited at 2 above has observed as below:-

"Two Traffic Cells have been established in the PWD (North and South) and they are staffed by an Assistant Executive Engineer and an Assistant Engineer. Their specific road safety responsibilities still need to be established."

The number of persons killed an injured in road traffic accidents in Karnataka is disturbingly high as revealed by the following figures of the Police Department.

| Year | No. of Persons killed | No. of Persons injured | Total |
|---|---|---|---|
| 1999 | 5834 | 40425 | 46259 |
| 2000 | 5649 | 41368 | 47017 |
| 2001 | 5805 | 42196 | 48001 |
| 2002 | 6366 | 45769 | 52135 |
| 2003 | 6195 | 45781 | 51976 |

The number of deaths due to road traffic accidents in Karnataka is unacceptably high compared to those in the developed countries and even compared to many neighbouring countries. It is therefore become necessary to optimize the output from the two Traffic Cells by assigning to them clearly defined road safety duties and responsibilities.

**Government Order No. PWD 12 EAP 2004, Bangalore, Dated 14th May 2004**

Having established two Traffic Cells in the Offices of the Chief Engineers C&B (North & South) with broadly assigned work the Government hereby assigns the following road safety duties and responsibilities to the two Cells.

1. Identifying all the locations on the PWD road network having inadequate road geometry as compared to IRC-73 and preparing a compendium of such locations for their improvement in phases.
2. Identifying all the junction points on the PWD roads and preparing a compendium of the same for their improvement in phases.
3. Identifying the spots / stretches on PWD roads where foot-paths, grade separators, pedestrian sub-ways, service roads, cattle crossings and other such facilities, specially for the safety of vulnerable road users, may be necessary & preparing a compendium of the same for implementation in phases.
4. Identifying the steps required to be taken to make the PWD roads accessible & safe for the handicapped persons.
5. Identifying CD works and bridges with inadequate provisions constituting road safety hazard & preparing a compendium of the same for their rectification in phases.
6. Identifying spots on PWD roads having unmanned railway level crossings and manned railway level crossings which are to be replaced with ROBs / RUBs to provide for smooth traffic and road safety.
7. Preparing proposals for improvement of accident-prone spots identified by the Police Department.
8. Taking follow-up action in implementing the G.O. No. PWD 12 EAP 2004 dated 15-03-2004 for mandatory use of "Manual for Safety in Road Design" of MOST, Government of India.
9. Carrying out Road Safety Audit (process audit, design audit and drawings audit) of all the road work estimates.
10. Taking follow-up action and co-ordination with the Police Department in implementation of the Road Accident Analysis System (RAAS) propsed to be installed in all the 28 offices of the Superintendents of Police and 3 Police Commissionerates.

11. Obtaining a monthly return from all the Sub-divisions of their Zone about the details of all the road traffic accidents where scene of offence drawings are provided by PWD Engineers to the Police Department and compiling them along with the drawings.
12. Conducting road safety training for the Departmental Engineers.
13. Dealing with the subjects of road safety, co-ordination with other Departments on matters pertaining to road safety through the Chief Engineer.
14. Identifying the stretches of PWD roads passing through Reserved Forests, Game Sanctuaries, National Parks & taking all such steps as may be necessary in consultation with the Forest Department in order to protect the wild life from road traffic hazard.
15. Any other appurtenant duties and responsibilities that may be assigned by the Chief Engineer from time to time.

By order and in the name of the Governor of Karnataka,

**G.S. Narasimha Murthy**

PR-567

Under Secretary to Government,
Public Works Department (EAP).

## ಲೋಕೋಪಯೋಗಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಲೋಇ 05 ಸೇಸಕಿ 2004, ಬೆಂಗಳೂರು, ದಿನಾಂಕ: 14ನೇ ಮೇ 2004

ಅಧಿಸೂಚನೆ ಸಂಖ್ಯೆ:ಲೋಇ 108 ಎಸ್‌ಪಿಎನ್ 02 ದಿನಾಂಕ:11-4-02ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ:1-3-02 ರಲ್ಲಿದ್ದಂತೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಲ್ಲಿ ಶ್ರೀ ಜಿ.ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿದ) ಇವರಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಜೇಷ್ಟತಾ ಕ್ರಮ ಸಂಖ್ಯೆ:2222 (ಕಿರಿಯ ಇಂಜಿನಿಯರ್ ವೃಂದದಲ್ಲಿ 6159)ರಲ್ಲಿ ಪ್ರತಿಬಿಂಬಿತವಾಗಿದೆ. ನಂತರ, ಶ್ರೀ ಜಿ.ಡಿ.ಮಂಕಾಳೆ ಇವರು ಮತ್ತು ದಿನಾಂಕ:11-4-02ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯಲ್ಲಿ ತಮಗಿಂತಲೂ ಜೇಷ್ಟತೆಯಲ್ಲಿ ಕಿರಿಯರಾದ ಶ್ರೀ ಕೆ. ಬಸವರಾಜ್ ಕ್ರಮ ಸಂಖ್ಯೆ:1786 (ಕಿರಿಯ ಇಂಜಿನಿಯರ್ 6160) ನಿಗದಿಗೊಂಡು ಅರ್ಹತಾ ದಿ:15-9-95 ಎಂದು ನಿಗದಿಪಡಿಸಿರುವುದರಿಂದ ತಮಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-2) ಹುದ್ದೆಗೆ ಬಡ್ತಿ ನೀಡುವ ಸಂದರ್ಭದಲ್ಲಿ ಅನ್ಯಾಯವಾಗಲಿದೆಯೆಂದು, ತಮ್ಮ ಜೇಷ್ಟತೆಯ ಸ್ಥಾನವನ್ನು ತಮಗಿಂತಲೂ ಜೇಷ್ಟತೆಯಲ್ಲಿ ಕಿರಿಯರಾದ ಶ್ರೀ ಬಸವರಾಜ್ ಇವರ ಜೇಷ್ಟತೆಯ ಮೇಲೆ ನಿಗದಿಪಡಿಸುವಂತೆ ಕೋರಿರುತ್ತಾರೆ. ದಿನಾಂಕ:11-4-02ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯಲ್ಲಿ ಶ್ರೀ ಬಸವರಾಜ್ ಇವರ ಜೇಷ್ಟತಾ ಕ್ರಮ ಸಂಖ್ಯೆ:1786 (ಕಿರಿಯ ಇಂಜಿನಿಯರ್ 6160)ನ್ನು ಆಧಾರವಾಗಿಟ್ಟು ಶ್ರೀ ಜಿ.ಡಿ. ಮಂಕಾಳೆ, ಇವರ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಪುನರ್‌ನಿಗದಿಪಡಿಸುವ ಸರ್ಕಾರದ ಕ್ರಮದ ಬಗ್ಗೆ ಯಾವುದೇ ಅಹವಾಲು:ಆಕ್ಷೇಪಣೆಗಳು ಇದ್ದಲ್ಲಿ ಅವುಗಳನ್ನು ಸಮರ್ಥಿಸುವಂತಹ ಸೂಕ್ತ ದಾಖಲೆ ಸಮೇತ ಸರ್ಕಾರಕ್ಕೆ 15 ದಿವಸದೊಳಗಾಗಿ ಸಲ್ಲಿಸುವಂತೆ ಸಮ ಸಂಖ್ಯೆ ದಿನಾಂಕ:20-3-04ರ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಬಗ್ಗೆ ಯಾವುದೇ ಆಕ್ಷೇಪಣೆ:ಅಹವಾಲುಗಳು ಸ್ವೀಕೃತವಾಗಿಲ್ಲದೇ ಇರುವುದರಿಂದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ಪ್ರಕಟಿಸಲಾದ ದಿನಾಂಕ:11-4-02ರ ಅಧಿಸೂಚನೆ ಸಂಖ್ಯೆ:ಲೋಇ 108 ಎಸ್‌ಪಿಎನ್ 02 ದಿನಾಂಕ:11-4-02ರಲ್ಲಿ ಶ್ರೀ ಜಿ.ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರ ಜೇಷ್ಟತೆಯನ್ನು ಈ ಕೆಳಕಂಡಂತೆ ಸೂಕ್ತ ಸ್ಥಾನದಲ್ಲಿ ಪುನರ್ ನಿಗದಿಗೊಳಿಸಿದೆ.

| ಕ್ರ. ಸಂ. | ಕಿರಿಯ ಇಂಜಿನಿಯರ್ ಹುದ್ದೆಯ ಜೇಷ್ಟತಾ ಕ್ರ. ಸಂ. | ಇಂಜಿನಿಯರ್ ಹೆಸರು | ಪ.ಜಾತಿ/ಪ.ಪಂ. | ಜನ್ಮ ದಿನಾಂಕ | ವಾಸ್ತವವಾಗಿ ಕಿರಿಯ ಇಂಜಿನಿಯರ್ (ವಿದ) ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1785-ಎ | 6159 | ಜಿ.ಡಿ. ಮಂಕಾಳೆ | ಪ.ಜಾ. | 10.3.1964 | 23.6.99 | 15.9.95 | |

ಈ ತಾತ್ಕಾಲಿಕ ಜೇಷ್ಟತಾ ನಿಗದಿಯು ದಿ:11-4-02ರ ಅಧಿಸೂಚನೆ ಸಂಖ್ಯೆ: ಲೋಇ 108 ಸೇಸಕಿ 02 ರಲ್ಲಿ ವಿಧಿಸಲಾಗಿರುವ ಷರತ್ತುಗಳಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 569

ಎಂ. ವೆಂಕಟರಸಪ್ಪ

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪವಿಭಾಗಗಳ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಲೋಕಾಯುಕ್ತ ತನಿಖಾ ವರದಿಯ ನಂತರ ಪ್ರಕರಣವನ್ನು ಇಲಾಖಾ ವಿಚಾರಣೆಗಾಗಿ ನಿಯಮ 14ಎ ಪ್ರಕಾರ ಲೋಕಾಯುಕ್ತಕ್ಕೆ ವಹಿಸುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಮಾನ್ಯ ಲೋಕಾಯುಕ್ತರ ಪತ್ರದ ಸಂ: ಕಂಪ್ಲೇಂಟ್:ಲೋಕ್:ಬಿಸಿಡಿ-726, 727, 729 ಮತ್ತು 730:2002, ದಿ: 21.11.03.

**ಪ್ರಸ್ತಾವನೆ:**

ಶ್ರೀ ಅಶೋಕಕುಮಾರ್ ಹೆಗಡೆ, ಅಂದಿನ ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಉಡುಪಿ ಇವರು ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ:ಉಪವಿಭಾಗಗಳ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಲೋಕಾಯುಕ್ತಕ್ಕೆ ಸಲ್ಲಿಸಿದ್ದ ದೂರಿನ ಅಂಶಗಳ ಮೇಲೆ ತನಿಖೆ ನಡೆಸಿ, ಲೋಕಾಯುಕ್ತವು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ ನಿಯಮ 12(3) ರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ಪತ್ರದೊಂದಿಗೆ ವರದಿ ಸಲ್ಲಿಸುತ್ತಾ, ಸದರಿ ತನಿಖಾ ವರದಿಯಂತೆ ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪವಿಭಾಗದ ವ್ಯಾಪ್ತಿಯ ಕೋಟ ಗ್ರಾಮ ಪಂಚಾಯಿತಿಯ ಮೊಡುಗಿಲಿಯರು ಶಾಲಾ ಕಟ್ಟಡದ ಕಾಮಗಾರಿ, ಕರ್ಜೆ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಮೈರಮಡಿ ರಸ್ತೆ ದುರಸ್ಥಿ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಅಂಗರಕಟ್ಟೆ:ಇಡಮೇರು ರಸ್ತೆ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಭಟ್ರಪಾಲ್ಕೆ ನೀರು ಸರಬರಾಜು ಮತ್ತಿತರ ಕಾಮಗಾರಿಗಳಲ್ಲಿ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ, ಶ್ರೀ ಟಿ.ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ, ಶ್ರೀ ಟಿ.ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಕೆ. ದುರ್ಗಾದಾಸ್, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ, ಇವರುಗಳು ಅವ್ಯವಹಾರದಲ್ಲಿ ಭಾಗಿಗಳಾಗಿ ತೀವ್ರ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಇವರುಗಳ ಮೇಲೆ ಶಿಸ್ತಿನ ನಡವಳಿಗಳನ್ನು ಪ್ರಾರಂಭಿಸಲು ಹಾಗೂ ಅಂತಹ ಶಿಸ್ತಿನ ನಡವಳಿಗಳನ್ನು ನಡೆಸಲು ಕೆಸಿಎಸ್ (ಸಿಸಿಎ) 1957ರ ನಿಯಮ 14(ಎ) ರಂತೆ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸುವಂತೆ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನನ್ವಯ ಅಗತ್ಯ ಕ್ರಮಕೈಗೊಳ್ಳಲು ದಿ: 22.11.2003 ರ ಪತ್ರದಲ್ಲಿ ಹೆಚ್ಚುವರಿ ನಿಬಂಧಕರು (ವಿಚಾರಣೆ 5), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿದ್ದರು.

ಸರ್ಕಾರವು ಮಾನ್ಯ ಲೋಕಾಯುಕ್ತರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪವಿಭಾಗಗಳಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತರು ತನಿಖೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದ ಪ್ರಕಾರ ಸಲ್ಲಿಸಿರುವ ವರದಿಯ ಪ್ರಕಾರ ಪ್ರಕರಣದಲ್ಲಿ ನಡೆದಿದೆ ಎನ್ನಲಾದ ಅಕ್ರಮಗಳಿಗೆ ಸಂಬಂಧಿಸಿದಂತೆ ಈ ಪ್ರಕರಣದಲ್ಲಿ ಒಳಗೊಂಡ ಅಧಿಕಾರಿ : ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 191 ಜಿಪಅ 03 ಬೆಂಗಳೂರು, ದಿನಾಂಕ: 26ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪ ವಿಭಾಗದ ವ್ಯಾಪ್ತಿಯ ಕೋಟ ಗ್ರಾಮ ಪಂಚಾಯಿತಿಯ ಮೊಡುಗಿಲಿಯರು ಶಾಲಾ ಕಟ್ಟಡದ ಕಾಮಗಾರಿ, ಕರ್ಜೆ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಮೈರಮಡಿ ರಸ್ತೆ ದುರಸ್ಥಿ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಅಂಗರಕಟ್ಟೆ: ಇಡಮೇರು ರಸ್ತೆ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಭಟ್ರಪಾಲ್ಕೆ ನೀರು ಸರಬರಾಜು ಮತ್ತಿತರ ಕಾಮಗಾರಿಗಳಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ : ನೌಕರರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ-11 ರೆಡ್ ವಿತ್ 13 ರಂತೆ ವಿಧಿ ವಿಧಾನಗಳನ್ನನುಸರಿಸಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣವನ್ನು ಅದೇ ನಿಯಮಗಳ ನಿಯಮ-14(ಎ) ಅನ್ವಯ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

1. ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ.
2. ಶ್ರೀ ಟಿ.ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ.
3. ಶ್ರೀ ಕೆ. ದುರ್ಗಾದಾಸ್, ಅಂದಿನ ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ.
4. ಶ್ರೀ ಟಿ.ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ.
5. ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಉಡುಪಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 574

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ : ಉಪವಿಭಾಗಗಳ ಅವ್ಯವಹಾರದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ನೇಮಿಸಿದ್ದ ವಿಚಾರಣಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ: ಗ್ರಾಅಪ 186 ಜಿಪಅ 02 ದಿ: 11.2.03.

2) ಸರ್ಕಾರಿ ಆದೇಶ ಸಂ: ಗ್ರಾಅಪ 186 ಜಿಪಅ 02, ದಿ: 11.7.03.

**ಪ್ರಸ್ತಾವನೆ:**

ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ:ಉಪವಿಭಾಗದ ವ್ಯಾಪ್ತಿಯಲ್ಲಿನ ಕಾಮಗಾರಿಗಳ ಅವ್ಯವಹಾರದಲ್ಲಿ ಭಾಗಿಗಳೆನ್ನಲಾದ ಶ್ರೀ ಸಿ. ಅನಂತರಾಮು ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ, ಶ್ರೀ ಟಿ.ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ಶ್ರೀ ರಘುರಾಮಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಉಡುಪಿ, ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಯವರು, ಉಡುಪಿ ಜಿಲ್ಲೆ, ಉಡುಪಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಪ್ರಾಜೆಕ್ಟ್ ಡೈರೆಕ್ಟರ್:ಆಫೀಸರ್ (ಡಿಆರ್‌ಡಿಎ) ಜಿಲ್ಲಾ ಪಂಚಾಯತ್, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಮೇಲೆ ಓದಲಾದ ಕ್ರ.ಸಂ. (1) ರಲ್ಲಿ ಸರ್ಕಾರವು ಆದೇಶಿಸಿತ್ತು.

ನಂತರ, ಈ ಪ್ರಕರಣವನ್ನು ಉಡುಪಿ ಜಿಲ್ಲಾಧಿಕಾರಿಗಳಿಂದ ಹಿಂಪಡೆದು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಶ್ರೀ ಹೆಚ್. ಉಮೇಶ್‌ಶೆಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪ್ರಕಾರ ಆದೇಶ ಹೊರಡಿಸಲಾಗಿತ್ತು. ಶ್ರೀ ಹೆಚ್. ಉಮೇಶ್‌ಶೆಟ್ಟಿ, ಇವರು ಸರ್ಕಾರಕ್ಕೆ ಪತ್ರ ಬರೆದು, ಸರ್ಕಾರವು ವಿಚಾರಣೆಗಾಗಿ ನಿಗದಿಪಡಿಸಿರುವ ರೂ. 5,000.00 ಗಳ ಸಂಭಾವನೆ ಬದಲು ರೂ. 30,000-00 ಗಳ ಸಂಭಾವನೆ ಪಾವತಿಸುವಂತೆ ಕೋರಿದ್ದರು. ಹೆಚ್ಚಿನ ಸಂಭಾವನೆ ನೀಡಲು ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ಪ್ರಕರಣವನ್ನು ಅವರಿಂದ ಹಿಂಪಡೆದು ಬೇರೆ ವಿಚಾರಣಾಧಿಕಾರಿಗೆ ವಹಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 186 ಜಿಪಅ 02 ಬೆಂಗಳೂರು, ದಿನಾಂಕ: 26ನೇ ಮೇ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪವಿಭಾಗದಲ್ಲಿ ನಡೆದಿದೆ ಎನ್ನಲಾದ ಅಕ್ರಮಗಳಿಗೆ ಸಂಬಂಧಿಸಿದಂತೆ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ಶ್ರೀ ರಘುರಾಮಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ಶ್ರೀ ಹೆಚ್. ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ದಿ: 11.7.03 ರ ಆದೇಶವನ್ನು ಮಾರ್ಪಡಿಸಿ, ಪ್ರಕರಣವನ್ನು ಅವರಿಂದ ಹಿಂಪಡೆದು ಈ ಪ್ರಕರಣದಲ್ಲಿ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(22) ರ ಅನ್ವಯ ಶ್ರೀ ಎಸ್. ಇಂದೂಧರ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಪ್ರಾಜೆಕ್ಟ್ ಡೈರೆಕ್ಟರ್: ಆಫೀಸರ್ (ಡಿಆರ್‌ಡಿಎ) ಜಿಲ್ಲಾ ಪಂಚಾಯತ್, ಉಡುಪಿ ಇವರೇ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ಈ ಪ್ರಕರಣದಲ್ಲಿ ವಿಚಾರಣೆ ಯಾವ ಹಂತಕ್ಕೆ ನಿಂತಿದೆಯೋ ಆ ಹಂತದಿಂದ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ಮುಂದುವರಿಸಿ ಮುಕ್ತಾಯ ಮಾಡಿ, ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಅವರಿಗೆ ನಿಗದಿತ ಸಂಭಾವನೆಯನ್ನು ಮಂಜೂರು ಮಾಡಲಾಗುವುದು.

ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯನ್ನು ಉಡುಪಿ, ಜಿಲ್ಲಾ ಪಂಚಾಯತ್‌ನ ಕಾರ್ಯಾಲಯದಲ್ಲಿ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು, ಜಿಲ್ಲಾ ಪಂಚಾಯತ್, ಉಡುಪಿ ಇವರು ವಿಚಾರಣಾಧಿಕಾರಿಗಳಿಗೆ ಅವಶ್ಯವಿರುವ ಸ್ಥಳಾವಕಾಶ, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 576

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮಾಜಿ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆರವರ ಶವ ಸಂಸ್ಕಾರಕ್ಕೆ ಸರಬರಾಜು ಮಾಡಲಾದ ಶ್ರೀಗಂಧದ ಮರಕ್ಕೆ ತಗುಲಿದ ವೆಚ್ಚವನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ:**
1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಅಧಿಕೃತ ಜ್ಞಾಪನ ಸಂಖ್ಯೆ: ಎ6(ಎ)/ಶ್ರೀಗಂಧ/ಸಿಆರ್-67/9697, ದಿನಾಂಕ: 12.1.2004.
2) ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ, ಮೈಸೂರು ಇವರ ಅಧಿಕೃತ ಜ್ಞಾಪನ ಸಂಖ್ಯೆ ಶ್ರೀಗಂಧ:ವಿವ:ಸಿಆರ್-06: 2002-03, ದಿನಾಂಕ: 12.1.2004.
3) ಉಪ ಕಾರ್ಯದರ್ಶಿ (ರಾಜ್ಯ ಶಿಷ್ಟಾಚಾರ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರಿಗೆ ಹೆಸರಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ) ರವರ ಪತ್ರ ಕ್ರಮಾಂಕ ಎ6(ಎ)/ಎಸ್‌ಡಿಎಲ್/ಸಿಆರ್-67/96-97, ದಿನಾಂಕ: 12.2.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ರಾಜ್ಯದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆರವರ ಅಂತ್ಯ ಸಂಸ್ಕಾರಕ್ಕಾಗಿ 100 ಕೆ.ಜಿ. ಶ್ರೀಗಂಧವನ್ನು ಸರಬರಾಜು ಮಾಡಲು ಮಂಜೂರಾತಿ ನೀಡಿ ಅದರ ಮೌಲ್ಯ ಹಾಗೂ ತೆರಿಗೆಗಳೊಂದಿಗೆ ಬಿಲ್ಲನ್ನು ಮಾನ್ಯ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳ ಹೆಸರಿಗೆ ನೀಡಿ ಹಣವನ್ನು ಪಡೆಯಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ, ಮೈಸೂರು ಇವರಿಗೆ ತಿಳಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಮೈಸೂರು ಶ್ರೀಗಂಧ ಕೋಠಿಯಲ್ಲಿ ಲಭ್ಯವಿರುವ ಕೆಳಕಂಡ ದರ್ಜೆಯ 100 ಕೆ.ಜಿ. ಶ್ರೀಗಂಧವನ್ನು ರೂ. 1,27,373.00 ಗಳ ವೆಚ್ಚದಲ್ಲಿ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

| | |
|---|---|
| ಜಜ್ ಪೋಕಲ್ 1ನೇ ದರ್ಜೆ | 52 ಕೆ.ಜಿ. |
| ಜಜ್ ಪೋಕಲ್ 2ನೇ ದರ್ಜೆ | 48 ಕೆ.ಜಿ. |
| ಒಟ್ಟು | 100 ಕೆ.ಜಿ. |

ಶ್ರೀಗಂಧದ ಬೆಲೆ, ಅರಣ್ಯ ಅಭಿವೃದ್ಧಿ ತೆರಿಗೆ, ಮಾರಾಟ ತೆರಿಗೆ, ಮಾರಾಟ ತೆರಿಗೆ ಮೇಲೆ ಸರ್ ಚಾರ್ಜ್, ಆದಾಯ ತೆರಿಗೆ, ಅರಣ್ಯ ಅಭಿವೃದ್ಧಿ ನಿಧಿ ಮತ್ತು ರಹದಾರಿ ಶುಲ್ಕ ಎಲ್ಲಾ ಸೇರಿ ಒಟ್ಟು ರೂ. 1,27,373.00 (ರೂಪಾಯಿಗಳು ಒಂದು ಲಕ್ಷದ ಇಪ್ಪತ್ತೇಳು ಸಾವಿರದ ಮೂರು ನೂರ ಎಪ್ಪತ್ತಮೂರು ಮಾತ್ರ).

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರು ಮಾಜಿ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ ಇವರ ಅಂತ್ಯ ಸಂಸ್ಕಾರಕ್ಕಾಗಿ ಸರಬರಾಜು ಮಾಡಿದ ಶ್ರೀಗಂಧದ ಬೆಲೆ ರೂ. 1,27,373.00 (ರೂಪಾಯಿಗಳು ಒಂದು ಲಕ್ಷದ ಇಪ್ಪತ್ತೇಳು ಸಾವಿರದ ಮೂರು ನೂರ ಎಪ್ಪತ್ತಮೂರು ಮಾತ್ರ) ಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ, ಮೈಸೂರು ಇವರ ಹೆಸರಿಗೆ ಕಳುಹಿಸಿಕೊಡುವಂತೆ ಉಪ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ), ಬೆಂಗಳೂರು ಇವರನ್ನು ಕೋರಿರುವರು.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಅರಣ್ಯ ಇಲಾಖೆಗೆ ಮೇಲ್ಕಂಡ ಹಣವನ್ನು ಪಾವತಿಸಬೇಕಾಗಿರುತ್ತದೆ. ಈ ಪ್ರಕ್ರಿಯೆ ಎರಡೂ ಇಲಾಖೆಗಳ ನಡುವೆ ನಡೆಯಬೇಕಾಗಿರುವ ಕಾರಣ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದ್ದು ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 28 ಎಫ್‌ಎಸ್‌ಡಬ್ಲ್ಯೂ 2004, ಬೆಂಗಳೂರು, ದಿನಾಂಕ: 26ನೇ ಮೇ 2004**

ಮಾಜಿ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆರವರ ಶವ ಸಂಸ್ಕಾರಕ್ಕೆ ಅರಣ್ಯ ಇಲಾಖೆಯು ಸರಬರಾಜು ಮಾಡಿರುವ 100 ಕೆ.ಜಿ. ಶ್ರೀಗಂಧದ ಮರಕ್ಕೆ ತಗುಲಿದ ವೆಚ್ಚ ರೂ. 1,27,373 (ರೂಪಾಯಿಗಳು ಒಂದು ಲಕ್ಷದ ಇಪ್ಪತ್ತೇಳು ಸಾವಿರದ ಮೂರು ನೂರ ಎಪ್ಪತ್ತಮೂರು ಮಾತ್ರ) ಗಳನ್ನು 2003-04 ರ ಆಯವ್ಯಯದಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆಯವ್ಯಯ ಲೆಕ್ಕ ಶೀರ್ಷಿಕೆ '2052-00-090-0-01-052 ಸಾಮಾನ್ಯ ವೆಚ್ಚಗಳು' ಇದರಿಂದ ಅರಣ್ಯ ಇಲಾಖೆಗೆ ಸಂಬಂಧಿಸಿದ ರಾಜಸ್ವ ಲೆಕ್ಕ ಶೀರ್ಷಿಕೆ '0406-01-101-1-06' ಇದಕ್ಕೆ ಮಹಾಲೇಖಾಪಾಲರು ವರ್ಗಾವಣೆ ಮಾಡುವ ಮೂಲಕ ಹೊಂದಾಣಿಕೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/354/ವೆಚ್ಚ-2/2004, ದಿನಾಂಕ: 14.5.2004 ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 577

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ವಿಶ್ವನಾಥ ರಾಮಣ್ಣ ಮಚಕುರಿ, ಅಸಿಸ್ಟೆಂಟ್ ಡ್ರಿಲ್ಲರ್, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರ ಮೇಲಿನ ಇಲಾಖಾ ವಿಚಾರಣಾ ವರದಿ - ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಐ.49: ಎಂಜಿಎಸ್.2002, ದಿನಾಂಕ: 9.8.2002.
2) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಎಆರ್‌ಇ.3: ಇಎನ್‌ಕ್ಯೂ-75: 2002-2003, ದಿನಾಂಕ: 30.9.2003.

**ಪ್ರಸ್ತಾವನೆ:**

ಶ್ರೀ ವಿಶ್ವನಾಥ ರಾಮಣ್ಣ ಮಚಕುರಿ, ಅಸಿಸ್ಟೆಂಟ್ ಡ್ರಿಲ್ಲರ್, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬಿಜಾಪುರ ಜಿಲ್ಲೆ ಇವರು ಕೊಳವೆ ಬಾವಿಗೆ ವಿದ್ಯುಚ್ಛಕ್ತಿ ಸರಬರಾಜು ನೀಡುವ ಕುರಿತಂತೆ ನೀರಿನ ಮಟ್ಟದ ಅಳತೆ ಪ್ರಮಾಣಪತ್ರ ನೀಡುವ ವಿಷಯದಲ್ಲಿ ರೂ. 500.00 ಗಳ ಅಕ್ರಮ ಸಂಭಾವನೆ ಕೇಳಿದರೆಂದು, ಶ್ರೀ ನಿಂಗಪ್ಪ ಎಲ್ಲಪ್ಪ ಶರ್ಮ ಇವರು ಸಲ್ಲಿಸಿದ ದೂರಿನ ಮೇರೆಗೆ ಲೋಕಾಯುಕ್ತ ಪೊಲೀಸ್ ರವರು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಸಿಕ್ಕಿಬಿದ್ದಿದ್ದು, ಆಪಾದಿತ ನೌಕರರ ವಿರುದ್ಧ ಮಾಡಿರುವ ಆರೋಪವು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿರುವುದರಿಂದ, ಉಪಲೋಕಾಯುಕ್ತರ ಶಿಫಾರಸ್ಸಿನಂತೆ ಕ್ರಮಸಂಖ್ಯೆ: 1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆ.ಸಿ.ಎಸ್.

(ಸಿ.ಸಿ.ಎ.) ನಿಯಮಾವಳಿ, 1957ರ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲಾಗಿತ್ತು.

ಅದರಂತೆ, ಮಾನ್ಯ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ಪತ್ರದಲ್ಲಿ, ಉಪಲೋಕಾಯುಕ್ತರು ಈ ಪ್ರಕರಣವನ್ನು ಶ್ರೀ ಬಸವರಾಜ್ ಎಸ್. ತಡಹಾಳ್, ಅಡಿಷನಲ್ ರಿಜಿಸ್ಟ್ರಾರ್ ಆಫ್ ಎಂಕ್ವಾಯರೀಸ್ (3) ಇವರಿಗೆ ವಿಚಾರಣೆ ನಡೆಸಲು ವಹಿಸಿದಂತೆ ಅವರು ವಿಚಾರಣೆ ಪೂರ್ಣಗೊಳಿಸಿ ನೀಡಿದ ವರದಿಯಲ್ಲಿ ಆಪಾದಿತ ಸರ್ಕಾರಿ ನೌಕರನ ಮೇಲೆ ಮಾಡಿದ ಆರೋಪಗಳು ಸಾಬೀತಾಗಿಲ್ಲವೆಂದು ತಿಳಿಸಿದ್ದು, ಅದರಂತೆ ಸದರಿ ಆಪಾದಿತ ಸರ್ಕಾರಿ ನೌಕರರನ್ನು ಆಪಾದನೆಯಿಂದ ಮುಕ್ತರಾಗಿಸಲು ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ.49: ಎಂಜಿಎಸ್. 2002, ಬೆಂಗಳೂರು, ದಿನಾಂಕ: 27ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಶ್ರೀ ವಿಶ್ವನಾಥ ರಾಮಣ್ಣ ಮಚಕುರಿ, ಅಸಿಸ್ಟೆಂಟ್ ಡ್ರಿಲ್ಲರ್, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರು ಅಕ್ರಮ ಸಂಭಾವನೆ ಪಡೆದರೆಂಬ ಆಪಾದನೆಯು ಸಾಬೀತಾಗದ ಕಾರಣ ಇವರನ್ನು ಸದರಿ ಆರೋಪದಿಂದ ಮುಕ್ತಗೊಳಿಸಲಾಗಿದೆ.

ಈ ಪ್ರಕರಣದಲ್ಲಿ ಇವರು ಭಾಗಿಯಾಗಿರದಿದ್ದಲ್ಲಿ ಇವರು ಸರ್ಕಾರದ ಯಾವ ಸೌಲಭ್ಯಕ್ಕೆ ಅರ್ಹರಿದ್ದರೋ, ಆ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಬಿ. ಸಿದ್ದಾಂತಿ**

ಪಿ.ಆರ್. 579

ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಅಂಬುತೀರ್ಥ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯ 20 ಮೆಗಾ ವ್ಯಾಟ್ ಸಾಮರ್ಥ್ಯದ ಎಂ.ಜಿ.ಹೆಚ್.ಇ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 22 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 52 ಎನ್‌ಸಿಇ 99 (ಸಿ), ದಿನಾಂಕ: 7.8.1999.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 52 ಎನ್‌ಸಿಇ 99, ದಿನಾಂಕ: 29.5.2002.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಎಂ.ಜಿ.ಹೆಚ್.ಇ / 2003 / 696, ದಿನಾಂಕ: 26.4.2004 ಮತ್ತು ಕೆಆರ್‌ಇಡಿ/ 06 / ಎಂ.ಜಿ.ಹೆಚ್.ಇ / 2003 / 843, ದಿನಾಂಕ: 17.5.2004.

**ಪ್ರಸ್ತಾವನೆ:**

ಮೆಸರ್ಸ್ ಸುಚೀಂದ್ರ ಇನ್‌ವೆಸ್ಟ್‌ಮೆಂಟ್ ಪ್ರೈವೇಟ್ ಲಿಮಿಟೆಡ್, (ಈಗಿನ ಹೆಸರು ಮೆಸರ್ಸ್ ಅಂಬುತೀರ್ಥ ಪವರ್ ಪ್ರೈವೇಟ್ ಲಿಮಿಟೆಡ್) ಕಂಪೆನಿಗೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ತಲಕಳಲೆ ಗ್ರಾಮದ ಶರಾವತಿ ನದಿಗೆ ಅಡ್ಡಲಾಗಿ ಎಂ.ಜಿ.ಹೆಚ್.ಇ ಟೈಲ್‌ರೇಸ್‌ನಲ್ಲಿ 20 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮೇಲೆ (2) ರಲ್ಲಿ ಓದಲಾದ ಆದೇಶದ ದಿನಾಂಕದಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

3. ಸದರಿ ಯೋಜನೆಯ ಸ್ಥಳದಲ್ಲಿ ನೀರಿನ ಎತ್ತರ (HEAD) 67 ಮೀ. ನಿಂದ 70.5 ಮೀಟರ್ ಇರುವುದರಿಂದ ಯೋಜನೆಯ ಸಾಮರ್ಥ್ಯವನ್ನು 20 ಮೆಗಾ ವ್ಯಾಟ್‌ನಿಂದ 22 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಹಾಗೂ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 29.11.2007 ರವರೆಗೆ ವಿಸ್ತರಿಸಬೇಕೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೇಲೆ (3) ರಲ್ಲಿ ಓದಲಾದ ಪತ್ರಗಳಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 168 ಎನ್‌ಸಿಇ 2004, ಬೆಂಗಳೂರು, ದಿನಾಂಕ: 28ನೇ ಮೇ 2004**

4. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಅಂಬುತೀರ್ಥ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ತಲಕಳಲೆ ಗ್ರಾಮದ ಹತ್ತಿರ ಶರಾವತಿ ನದಿಗೆ ಅಡ್ಡಲಾಗಿ M.G.H.E. Tailrace ನಲ್ಲಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 20 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯು ಸಾಮರ್ಥ್ಯವನ್ನು 22 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 29.11.2007 ರವರೆಗೆ ನೀಡಿ ಅನುಮತಿ ನೀಡಲಾಗಿದೆ.

5. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 580

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಆಗಿರುವ ದೇವರಾಜ ಅರಸ್ ಕೆನಾಲ್, ಮದ್ದೂರು, ದೇವರ ಬೆಳಕೆರೆ ಮತ್ತು ಮುಧೋಳ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 28 ಎನ್‌ಸಿಇ 96 (27), ದಿನಾಂಕ: 24.7.1996.
2) ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 148 ಪಿಪಿಸಿ 89(3), ದಿನಾಂಕ: 14.3.1990.
3) ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 148 ಪಿಪಿಸಿ 89, ದಿನಾಂಕ: 14.3.1990.
4) ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 148 ಪಿಪಿಸಿ 89(3), ದಿನಾಂಕ: 14.3.1990.
5) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಇಂಇ 59 ಎನ್‌ಸಿಇ 2002, ದಿನಾಂಕ: 25.6.2002.
6) ಕಂಪೆನಿಯ 4 ಸಮಜಾಯಿತಿ ಪತ್ರಗಳ ದಿನಾಂಕ: 5.7.2002.

**ಪ್ರಸ್ತಾವನೆ:**

ಮೆಸರ್ಸ್ ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಗೆ ಮೇಲೆ ಕ್ರಮ ಸಂಖ್ಯೆ (1) ರಿಂದ (4) ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಅನುಕ್ರಮವಾಗಿ ದೇವರಾಜ್ ಅರಸ್ ಕೆನಾಲ್ (6 ಮೆಗಾ ವ್ಯಾಟ್), ಮದ್ದೂರು (2 ಮೆಗಾ ವ್ಯಾಟ್) ದೇವರಬೆಳಕೆರೆ (1 ಮೆಗಾ ವ್ಯಾಟ್) ಮತ್ತು ಮುಧೋಳ (1 ಮೆಗಾ ವ್ಯಾಟ್) ಕಿರು ಜಲ ವಿದ್ಯುತ್ ಯೋಜನೆಗಳನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಯೋಜನೆಗಳ ಅನುಷ್ಠಾನದ ನಿಟ್ಟಿನಲ್ಲಿ ಕಂಪೆನಿಯು ಯಾವುದೇ ಪ್ರಗತಿ ಸಾಧಿಸಿಲ್ಲ ಹಾಗೂ ಸಾಧಿಸಿದ ಪ್ರಗತಿಯು ಸಮಾಧನಕರವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಕಾರಣ ಕೇಳಿ ನೋಟೀಸು ಜಾರಿ ಮಾಡಲಾಗಿತ್ತು.

3. ಈ ನೋಟೀಸ್‌ಗೆ ಕಂಪೆನಿಯು ಮೇಲೆ (6) ರಲ್ಲಿ ಓದಲಾದ ಪತ್ರಗಳಲ್ಲಿ ಸಮಜಾಯಿಷಿ ನೀಡಿತ್ತು.

4. ಕಂಪೆನಿಯು ನೀಡಿರುವ ಸಮಜಾಯಿಷಿಗೆ ಸಮಾಧಾನಕರವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 205 ಎನ್‌ಸಿಇ 2002, ಬೆಂಗಳೂರು, ದಿನಾಂಕ: 28ನೇ ಮೇ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೆಸರ್ಸ್ ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಗೆ ಮೇಲೆ ಕ್ರಮ ಸಂಖ್ಯೆ: (1) ರಿಂದ (4) ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಅನುಕ್ರಮವಾಗಿ ದೇವರಾಜ್ ಅರಸ್ ಕೆನಾಲ್ (6 ಮೆಗಾ ವ್ಯಾಟ್). ಮದ್ದೂರು (2 ಮೆಗಾ ವ್ಯಾಟ್) ದೇವರಬೆಳಕೆರೆ (1 ಮೆಗಾ ವ್ಯಾಟ್) ಮತ್ತು ಮುಧೋಳ (1 ಮೆಗಾ ವ್ಯಾಟ್) ಕಿರು ಜಲ ವಿದ್ಯುತ್ ಯೋಜನೆಗಳ ಹಂಚಿಕೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 581

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕೃಷ್ಣಾ ಜಲ ವಿವಾದದ ನ್ಯಾಯಮಂಡಳಿ ಕೆಲಸಗಳಿಗೆ ದೆಹಲಿಯಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿಗಳಿಗೆ ನಿಯಮಾವಳಿಯಲ್ಲಿ ಸಡಿಲಿಕೆ ನೀಡುವುದರ ಕುರಿತು.

**ಓದಲಾಗಿದೆ:** 1) ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಸಂಅ/ಕೃಗೋಘ/31(ಎ)/2003-04/518-19, ದಿನಾಂಕ: 27.10.2003.

**ಪ್ರಸ್ತಾವನೆ:**

ಕೃಷ್ಣಾ ಗೋದಾವರಿ ಘಟಕದ ಅಧಿಕಾರಿಗಳು ಕೃಷ್ಣಾ ಜಲವಿವಾದ ನ್ಯಾಯಮಂಡಳಿಯ ಕಲಾಪಗಳು ಹಾಗೂ ವಕೀಲರ ಸಮಾವೇಶಗಳು ದೀರ್ಘಕಾಲ ನಡೆಯುವ ಸಂದರ್ಭಗಳಲ್ಲಿ ಅಧಿಕಾರಿಗಳು ಅನಿವಾರ್ಯವಾಗಿ ಹೆಚ್ಚು ದಿನ ನವದೆಹಲಿಯಲ್ಲಿ ವಾಸ್ತವ್ಯ ಮಾಡಬೇಕಾಗಿರುವುದರಿಂದ, ಕೃಷ್ಣಾ ಜಲ ವಿವಾದದ ಕೆಲಸಗಳಲ್ಲಿ ಸಿಬ್ಬಂದಿ/ಅಧಿಕಾರಿಗಳು ನವದೆಹಲಿಗೆ ಪ್ರಯಾಣ ಮಾಡಲು ನಿಗದಿತ ಅರ್ಹತೆ ಹೊಂದಿಲ್ಲದಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್/ತಾಂತ್ರಿಕ ಸಹಾಯಕರು ಮತ್ತು ಮೇಲ್ಪಟ್ಟ ಅಧಿಕಾರಿಗಳು ವಿಮಾನದಲ್ಲಿ ಪ್ರಯಾಣ ಮಾಡಲು ಹಾಗೂ 60 ದಿನಗಳವರೆಗೆ ವಾಸ್ತವ್ಯ ಮಾಡುವ ಬಗ್ಗೆ ನಿಯಮಾವಳಿಗಳನ್ನು ಸಡಿಲಿಸಿ, ಸರ್ಕಾರದ ಆದೇಶ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 58 ಕೃವಿಇ 2003, ಬೆಂಗಳೂರು, ದಿನಾಂಕ: 28ನೇ ಮೇ 2004**

ಮಿತವ್ಯಯ ಆದೇಶಗಳನ್ನು ಗಮನದಲ್ಲಿರಿಸಿಕೊಂಡು ಅತ್ಯಂತ ಅಗತ್ಯವೆಂದು ಕಂಡುಬರುವ ಸಂದರ್ಭಗಳಲ್ಲಿ ಮಾತ್ರ ಕೃಷ್ಣಾ ಜಲವಿವಾದದ ನ್ಯಾಯಮಂಡಳಿ ಕೆಲಸಗಳಿಗೆ ಅಧಿಕಾರಿಗಳನ್ನು 60 ದಿವಸಗಳಿಗೆ ಮೀರದಂತೆ ನವದೆಹಲಿಗೆ ನಿಯೋಜಿಸಲು ಹಾಗೂ ಕೃಷ್ಣಾ ಯುನಿಟ್‌ನ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುವ ತಾಂತ್ರಿಕ ಸಹಾಯಕರು/ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್‌ಗಳು ಕೃಷ್ಣಾ ಜಲವಿವಾದದ ನ್ಯಾಯಮಂಡಳಿಯ ಕೆಲಸಗಳಿಗೆ ನವದೆಹಲಿಗೆ ವಿಮಾನದಲ್ಲಿ ಹೋಗಿ ಬರಲು ಅನುಮತಿ ನೀಡಲು ಪ್ರಧಾನ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ ಇವರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

2. ಈ ಆದೇಶವು ತಕ್ಷಣದಿಂದ ಹಾಗೂ ಕೃಷ್ಣಾ ಜಲ ವಿವಾದದ ನ್ಯಾಯಮಂಡಳಿಯ ಕಲಾಪಗಳು ಮುಗಿಯುವವರೆಗೆ ಜಾರಿಯಲ್ಲಿರುತ್ತದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 1248.ಆಕೋ-1/2004, ದಿನಾಂಕ: 11.5.2004ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 582

**ಹೆಚ್.ಜಿ. ಛಾಯಾಪತಿ**

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ), ಜಲ ಸಂಪನ್ಮೂಲ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ರಾಜ್ಯದಲ್ಲಿನ ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಈ ಕುರಿತಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರಿಂದ ಸ್ವೀಕರಿಸಲಾದ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿನ ಈ ಕೆಳಕಂಡ 14 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಿರುವ ದಿನಾಂಕದಂದು ಅಂತ್ಯಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ ಪ್ರಿಸ್ಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಮುಕ್ತಾಯಗೊಂಡ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ರವರು ಕೋರಿದ್ದಾರೆ.

| ಕ್ರಮ ಸಂಖ್ಯೆ | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 1. | Metropolitan Magistrate (Railways), Bangalore | 31-3-2004 |
| 2. | Special Judicial Magistrate (Railways), Gulbarga | -"- |
| 3. | Special Judicial Magistrate (Railways), Mysore | -"- |
| 4. | Addl. Civil Judge (Jr.Dn.) & JMFC, Kunigal | -"- |
| 5. | Addl. Civil Judge (Jr.Dn.) & JMFC, Sira | -"- |
| 6. | Addl. Civil Judge (Jr.Dn.) & JMFC, Gowribidanur | -"- |
| 7. | Addl. Civil Judge (Jr.Dn.) & JMFC, Chintamani | -"- |
| 8. | III Addl. Prl. Judge, Family Court, Bangalore | -"- |
| 9. | III Addl. Civil Judge (Jr.Dn.) Bijapur | -"- |
| 10. | Family Court, Gulbarga | -"- |
| 11. | III and IV Addl. District and Sessions Judge, Gulbarga | 16-4-2004 |
| 12. | II and III Addl. Civil Judge (Sr.Dn.) Gulbarga | -"- |
| 13. | IV and V Addl. Civil Judge (Jr.Dn.) Gulbarga | -"- |
| 14. | Civil Judge (Sr.Dn.) Aland | 21-4-2004 |

**ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ಬೆಂಗಳೂರು, ದಿನಾಂಕ: 15ನೇ ಮೇ 2004**

ಪ್ರಸ್ತಾವನೆಯಲ್ಲಿ ಹೆಸರಿಸಲಾದ ರಾಜ್ಯದ 14 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸ್ಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಕಾರ್ಯಾವಧಿ ಮುಕ್ತಾಯಗೊಂಡ ದಿನಾಂಕದಿಂದ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ.

ಪ್ರಸ್ತಾವನೆಯಲ್ಲಿನ ಕ್ರಮ ಸಂಖ್ಯೆ: 1, 2 ಮತ್ತು 3 ರಲ್ಲಿ ನಮೂದಿಸಿರುವ ನ್ಯಾಯಾಲಯಗಳಿಗೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ "2014-00-105-0-06 ಯೋಜನೇತರ" ಅಡಿಯಲ್ಲಿಯೂ ಕ್ರಮ ಸಂಖ್ಯೆ: 4 ರಿಂದ 7, 9 ಮತ್ತು 11 ರಿಂದ 14 ರಲ್ಲಿನ ನ್ಯಾಯಾಲಯಗಳಿಗೆ "2014-00-105-0-01 ಯೋಜನೇತರ" ಅಡಿಯಲ್ಲಿಯೂ ಹಾಗೂ ಕ್ರಮ ಸಂಖ್ಯೆ: 8 ಮತ್ತು 10 ರಲ್ಲಿನ ನ್ಯಾಯಾಲಯಗಳಿಗೆ "2014-00-117-0-00 ಯೋಜನೇತರ" ಅಡಿಯಲ್ಲಿ ಕ್ರಮವಾಗಿ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 583

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ-1)

## REVENUE SECRETARIAT

**Sub:** Special Voluntary Retirement Scheme for surplus employees of State Government - Request of Shri R. Bhagavandas, SDA District forum, Bellary opting for special VRS - reg.

**Read:**
1. Govt. Order No. DPAR 15 SDE 2003 dated 1st Sept. 2003.
2. Govt. Order No. DPAR 15 SDE 2003 dated 17th May 2004.

3. Representation of Shri R. Bhagavandas, SDA, dated 5.9.2003 addressed to Deputy Commissioner, Bellary requesting for accepting his application for Special Voluntary Retirement Scheme.
4. Letter No. EST.2: 121-2003-04 dated 4.11.2003 of the Deputy Commissioner, Bellary.
5. Letter and Notification No. EST.2: 121-2003-04 dated 29.11.2003 and 9.12.2003 of the Deputy Commissioner, Bellary.

**PREAMBLE:**

Government of Karnataka in the Government Order read at (1) above, have introduced a scheme called "Special Voluntary Retirement Scheme (VRS)" for the regular State Government Employees, who are declared as surplus on an experimental basis. The Government has also stipulated the details of the scheme and the eligibility criteria in the said GO.

In the Govt. Order read at (2) above, Government have issued further instructions in partial modification of the instructions issued in the Govt. Order dated 1.9.2003, wherein it has been indicated that the Secretary to Govt., of the concerned Department will issue the final orders and etc. It is also indicated therein that this scheme will be in force upto 31.5.2004.

In the representation read at (3) above, Shri R. Bhagavandas, SDA (I/C FDA u/r 32 KCSRs) has requested the Deputy Commissioner, Bellary to accept his application for Special VRS.

Vide letter dated 4.11.2003 read at (4) above, the Deputy Commissioner, Bellary has sent a proposal to Government for accepting the request of Shri R. Baghavandas under Special VRS. The Deputy Commissioner has also reported that as per the Service Register, the date of birth of Shri Bhagawandas is 1.7.1949 and, his date of entry into service is 2.7.1973. It is further reported that Shri Bhagavandas has put in 30 years of service and has attained the age of 54 years. This official will attain the age of 55 years on 30.6.2004. The Deputy Commissioner while forwarding the SR of the applicant has also reported that there are no Departmental Enquiries pending against him and no Government dues are outstanding.

In the Notification dated 29.11.2003 and dated 9.12.2003 read at (5) above, the Deputy Commissioner, Bellary has declared one post of SDA in the Office of the Deputy Commissioner, Bellary as surplus and, accordingly, on that basis, he has recommended to accept the request of Shri R. Bhagavandas for Special VRS.

The request of Shri R. Bhagavandas, SDA and the proposals of the Deputy Commissioner, have been examined in the light of the details of the Scheme specified in the Govt. Order dated 1.9.2003 and 17.5.2004 and, order as follows:

**Government Order No. RD 417 BMM 2003, Bangalore, Dated 29th May 2004**

After examining in detail the issues narrated in the preamble, Government are pleased to accept the application of Shri R. Bhagavandas, SDA (i/c. FDA u/r 32 KCSRs) District Forum, Bellary and permit him to retire under Special VRS with immediate effect. Consequently, one post of SDA in the Office of the Deputy Commissioner, Bellary so declared as surplus, shall stand abolished.

The Ex-gratia and other benefits shall be governed as per the provisions of the Govt. Order dated 1.9.2003 and 17.5.2004.

This order issued as per the powers delegated to the Secretary of the Departments in GO No. DPAR 15 SDE 2003 dated 17.5.2004.

By order and in the name of the Governor of Karnataka,

**D.B. Ganachari**

Under Secretary to Government,

Revenue Department (Services)

PR-584

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ನ್ಯಾಯಾಧೀಶರುಗಳ ಸೇವೆಯನ್ನು 60 ವರ್ಷ ವಯಸ್ಸು ಪೂರೈಸುವವರೆಗೆ ಸೇವೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಓಬಿ (1) 349 : 2003, ದಿನಾಂಕ: 17.4.2004.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು 58 ವರ್ಷ ವಯಸ್ಸಿನ ನಂತರವೂ ಮುಂದುವರೆಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರದಲ್ಲಿ 60 ವರ್ಷಗಳವರೆಗೆ ಮುಂದುವರೆಸಬಹುದು.

ಅದರಂತೆ ಪರಾಮರ್ಶಿಸಿ ಸ್ಕ್ರೀನಿಂಗ್ ಸಮಿತಿ ಮತ್ತು ಪೂರ್ಣ ಪೀಠವು ಈ ಕೆಳಕಂಡ ಜಿಲ್ಲಾ ನ್ಯಾಯಾಧೀಶರುಗಳನ್ನು ಅವರ ಹೆಸರಿನ ಎದುರಿಗೆ ತೋರಿಸಿರುವ ದಿನಾಂಕದಂದು 58 ವರ್ಷ ವಯಸ್ಸನ್ನು ಪೂರೈಸಿದ ನಂತರವೂ ಇವರುಗಳು 60 ವರ್ಷ

ವಯಸ್ಸಾಗುವವರೆಗೆ ಸೇವೆಯಲ್ಲಿ ಮುಂದುವರಿಯಲು ಅರ್ಹರಿರುವರೆಂದು ತೀರ್ಮಾನಿಸಲಾಗಿದೆಯೆಂದು ತಿಳಿಸಿ ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷ ವಯಸ್ಸಿನವರೆಗೆ ಸೇವೆಯಲ್ಲಿ ಮುಂದುವರಿಸಲು ಮೇಲೆ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು, ಇವರು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

| | | |
|---|---|---|
| 1 | ಶ್ರೀ ಬಸವಂತರಾಯ ಪಾಟೀಲ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬಿಜಾಪುರ | 30.4.2004 |
| 2 | ಶ್ರೀ ಎ.ಎಂ. ಪತ್ತಾರ್, ಜಿಲ್ಲಾ ನ್ಯಾಯಾಧೀಶರು, ಪ್ರಿಸೈಡಿಂಗ್ ಅಧಿಕಾರಿ, ಕೈಗಾರಿಕಾ ನ್ಯಾಯಾಧೀಕರಣ, ಹುಬ್ಬಳ್ಳಿ | 30.4.2004 |
| 3 | ಶ್ರೀ ಎಂ. ಚಿದಾನಂದ ರಾವ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಳಗಾಂ | 31.5.2004 |
| 4 | ಶ್ರೀ ಜಿ.ವಿ. ಹೆಗ್ಡೆ, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮೈಸೂರು | 30.6.2004 |
| 5 | ಶ್ರೀ ಕುಕ್ಕಜೆ ರಾಮಕೃಷ್ಣ ಭಟ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ತುಮಕೂರು | 30.6.2004 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸೇಉನ್ಯಾ 2004, ಬೆಂಗಳೂರು, ದಿನಾಂಕ: 11ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಜಿಲ್ಲಾ ನ್ಯಾಯಾಧೀಶರುಗಳು ಅವರ ಹೆಸರಿನ ಎದುರಿಗೆ ತೋರಿಸಿರುವ ದಿನಾಂಕದಂದು 58 ವರ್ಷಗಳು ಪೂರೈಸಿದ ನಂತರವೂ ಇವರುಗಳ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ತನಕ ಸೇವೆಯಲ್ಲಿ ಮುಂದುವರೆಸಲು ಸರ್ಕಾರ ಆದೇಶಿಸುತ್ತದೆ.

| | | |
|---|---|---|
| 1 | ಶ್ರೀ ಬಸವಂತರಾಯ ಪಾಟೀಲ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬಿಜಾಪುರ | 30.4.2004 |
| 2 | ಶ್ರೀ ಎ.ಎಂ. ಪತ್ತಾರ್, ಜಿಲ್ಲಾ ನ್ಯಾಯಾಧೀಶರು, ಪ್ರಿಸೈಡಿಂಗ್ ಅಧಿಕಾರಿ, ಕೈಗಾರಿಕಾ ನ್ಯಾಯಾಧೀಕರಣ, ಹುಬ್ಬಳ್ಳಿ | 30.4.2004 |
| 3 | ಶ್ರೀ ಎಂ. ಚಿದಾನಂದ ರಾವ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಳಗಾಂ | 31.5.2004 |
| 4 | ಶ್ರೀ ಜಿ.ವಿ. ಹೆಗ್ಡೆ, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮೈಸೂರು | 30.6.2004 |
| 5 | ಶ್ರೀ ಕುಕ್ಕಜೆ ರಾಮಕೃಷ್ಣ ಭಟ್, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ತುಮಕೂರು | 30.6.2004 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 585

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** "ಹನಿ ನೀರಾವರಿಗಾಗಿ ಕೇಂದ್ರವಲಯ ಯೋಜನೆ" (2401-00-108-2-30) (ಯೋಜನೆ) ಯನ್ನು 2004-05ನೇ ಸಾಲಿನಲ್ಲಿ ಜಾರಿಗೊಳಿಸುವ ಬಗ್ಗೆ ಮಾರ್ಗಸೂಚಿಯಲ್ಲಿ ಪರಿಷ್ಕರಣೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 128 ತೋಯೋಕಾ 2003, ದಿನಾಂಕ: 10.9.2003.
2) ದಿನಾಂಕ: 28.4.2004 ರಂದು ಪ್ರಧಾನ ಕಾರ್ಯದರ್ಶಿಗಳು (ತೋಟಗಾರಿಕೆ) ಇವರ ಅಧ್ಯಕ್ಷತೆಯಲ್ಲಿ ನಡೆದ ತೋಟಗಾರಿಕೆ ಇಲಾಖೆಯಲ್ಲಿ 2004-05ನೇ ಸಾಲಿನ ಮುಂದುವರೆದ ಯೋಜನೆಗಳಿಗೆ ಮಂಜೂರಾತಿ ನೀಡುವ ಸಭೆ ನಡವಳಿ.
3) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಯೋ/ಸತೋಅ1/1/2004-05 ದಿನಾಂಕ: 11.5.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ 2003-04ನೇ ಸಾಲಿನಲ್ಲಿ ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಉಪಕರಣಗಳನ್ನು ಖರೀದಿಸಿ ಅಳವಡಿಸುವ ರೈತರುಗಳಿಗೆ ಸಹಾಯಧನವನ್ನು ಒದಗಿಸಲು ತೋಟಗಾರಿಕೆ ನಿರ್ದೇಶಕರಿಗೆ ಆದೇಶ ನೀಡಲಾಗಿತ್ತು. ಬಿಜಾಪುರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಎಲ್ಲಾ ರೈತರಿಗೆ ಶೇಕಡ 100 ರಷ್ಟು ಪ್ರಮಾಣದಲ್ಲಿ ಸಹಾಯಧನ ಒದಗಿಸಲು ಗಂಗಾಕಲ್ಯಾಣ ಯೋಜನೆಯಡಿ ಫಲಾನುಭವಿಗಳಿಗೆ ಎಲ್ಲಾ ಜಿಲ್ಲೆಗಳಲ್ಲಿ ಶೇಕಡ 100 ರಷ್ಟು ಸಹಾಯಧನ ಒದಗಿಸಲು ಹಾಗೂ ರಾಜ್ಯದ ಇತರೆ ಜಿಲ್ಲೆಗಳಲ್ಲಿ ರೈತರಿಗೆ ಶೇಕಡ 50ರ ಪ್ರಮಾಣದಲ್ಲಿ ಸಹಾಯಧನ ಒದಗಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (2) ರಲ್ಲಿ ತಿಳಿಸಿರುವಂತೆ ದಿನಾಂಕ: 28.4.2004 ರಂದು ನಡೆದು ತೋಟಗಾರಿಕೆ ಇಲಾಖೆಯ 2004-05ನೇ ಸಾಲಿನಲ್ಲಿ ಮುಂದುವರೆದ ಯೋಜನೆಗಳಡಿ ಮಂಜೂರಾತಿ ನೀಡುವ ಸಭೆಯಲ್ಲಿ ಸದರಿ ಯೋಜನೆಯನ್ನು ಮುಂದುವರೆಸಲು ಹಾಗೂ ಹೆಚ್ಚಿನ ರೈತರಿಗೆ ಈ ಯೋಜನೆಯ ಲಾಭವನ್ನು ಒದಗಿಸಬೇಕೆಂಬ ಉದ್ದೇಶದಿಂದ ರಾಜ್ಯಾದ್ಯಂತ ಶೇಕಡ 50 ರಷ್ಟು ಸಹಾಯಧನ ಒದಗಿಸಲು ತೀರ್ಮಾನಿಸಲಾಯಿತು.

ಈ ಅನ್ವಯ ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (3)ರ ಪತ್ರದಲ್ಲಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ ಹಾಗೂ ಸರ್ಕಾರದ ಆದೇಶವನ್ನು ಕೋರಿದ್ದಾರೆ. ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 133 ತೋಯೋಕಾ 2004, ಬೆಂಗಳೂರು, ದಿನಾಂಕ: 28ನೇ ಮೇ 2004**

ತೋಟಗಾರಿಕೆ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಹನಿ ನೀರಾವರಿಗಾಗಿ ಕೇಂದ್ರ ವಲಯ ಯೋಜನೆಯಡಿ (2401-00-108-2-30) (ರಾಜ್ಯವಲಯ ಯೋಜನೆ) ರಾಜ್ಯದ ಎಲ್ಲಾ ಜಿಲ್ಲೆಗಳ ರೈತರಿಗೆ ಶೇಕಡಾ 50ರ ಪ್ರಮಾಣದಲ್ಲಿ ಹಾಗೂ ಗಂಗಾ

ಕಲ್ಯಾಣ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಎಲ್ಲಾ ಜಿಲ್ಲೆಯಲ್ಲಿ ಶೇಕಡ 100 ರ ಸಹಾಯಧನ ಒದಗಿಸುವುದು. ಉಳಿದಂತೆ ಸದರಿ ಯೋಜನೆ ಅನುಷ್ಠಾನದ ಮಾರ್ಗಸೂಚಿಯಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 586

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀಮತಿ ಸಿ. ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿಗಳ ನೇಮಕ - ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಎಸ್ಇಎನ್ 2002, ದಿನಾಂಕ: 28.7.2003.

2) ಶ್ರೀ ಜೆ.ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರ ಪತ್ರ ದಿನಾಂಕ: 1.8.2003.

**ಪ್ರಸ್ತಾವನೆ:**

ಶ್ರೀಮತಿ ಸಿ. ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯಲ್ಲಿ ಕಾರ್ಯದರ್ಶಿಯಾಗಿ ಪ್ರಭಾರ ವಹಿಸಿದ್ದಾಗ ಮಂಡಳಿಯ ವತಿಯಿಂದ ಕೈಗೊಳ್ಳಲಾದ ಜನಜಾಗೃತಿ ಕಾರ್ಯಕ್ರಮಗಳಿಗೆ ವೆಚ್ಚ ಮಾಡುವಲ್ಲಿ ಕರ್ನಾಟಕ ಆರ್ಥಿಕ ಸಂಹಿತೆಯನ್ನು ಉಲ್ಲಂಘಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿದ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 28.7.2003 ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಜೆ.ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಆದರೆ ತಾವು ಕರ್ನಾಟಕ ರಾಜ್ಯ ಬಳಕೆದಾರರ ಕುಂದುಕೊರತೆಗಳ ವಿಚಾರಣಾ ಆಯೋಗದ ಪೂರ್ಣಾವಧಿ ಸದಸ್ಯರಾಗಿರುವುದರಿಂದ ಈ ವಿಚಾರಣೆ ನಡೆಸಲು ಸಾಧ್ಯವಿಲ್ಲವೆಂದು ಅವರು ತಿಳಿಸಿದ್ದಾರೆ. ಬೇರೆ ವಿಚಾರಣಾಧಿಕಾರಿಯನ್ನು ನೇಮಕ ಮಾಡುವ ಸಲುವಾಗಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಎಸ್ಇಎನ್ 2002, ಬೆಂಗಳೂರು, ದಿನಾಂಕ: 19ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ದಿನಾಂಕ: 28.7.2003 ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಶ್ರೀಮತಿ ಸಿ. ಸರೋಜ, ಅಧೀನ ಕಾರ್ಯದರ್ಶಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 3 ಸೇಇಇ 96 ದಿನಾಂಕ: 24.4.1998 ರನ್ವಯ ಗೌರವಧನವನ್ನೂ ಸಿಆಸುಇ 45 ಸೇಇಇ 2001 ದಿನಾಂಕ: 4.3.2002 ರನ್ವಯ ವಾಹನ ಭತ್ಯೆಯನ್ನು ಪಡೆಯುತ್ತಾರೆ. ವಿಚಾರಣೆಯನ್ನು 3 ತಿಂಗಳ ಒಳಗೆ ಮುಕ್ತಾಯಗೊಳಿಸುವುದು.

ಉಳಿದಂತೆ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಬೆಂಗಳೂರು ಅವರೇ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ. ಹಾಗೂ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ ಸರಬರಾಜು ಹಾಗೂ ಶೀಘ್ರಲಿಪಿಗಾರರ ಸೇವೆಗಳನ್ನು ಒದಗಿಸಲು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 587

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ : ಮಂಡನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 37 ಎಸ್ಇಎನ್ 2003, ದಿನಾಂಕ: 24.2.2004.

2) ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ರವರ ದಿನಾಂಕ: 22.3.2004 ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಎಸ್. ಕೃಷ್ಣಮೂರ್ತಿ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ರವರು ಕೃಷ್ಣಾ ಮೇಲ್ದಂಡೆ ಯೋಜನೆ ಜಮಖಂಡಿಯಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಜಮಖಂಡಿ ಹಾಗೂ ಅಥಣಿ ತಾಲ್ಲೂಕಿನ ವಿವಿಧ ಗ್ರಾಮಗಳ ಸರ್ವೆ ನಂಬರುಗಳ ಭೂ ಸ್ವಾಧೀನ ಪರಿಹಾರಧನ ಪಾವತಿಯಲ್ಲಿ ಅಕ್ರಮವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ 13 ಆರೋಪಗಳಿಗಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 24.2.2004 ರ ನೋಟೀಸ್ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಆರೋಪಿತ ಅಧಿಕಾರಿ ಶ್ರೀ ಎಸ್. ಕೃಷ್ಣಮೂರ್ತಿ, ಕೆಎಎಸ್ ಅಧಿಕಾರಿ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 22.3.2004 ರ ಪ್ರತಿವಾದದ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣೆಯನ್ನು ನಡೆಸುವುದು ಅತ್ಯಾವಶ್ಯಕವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 37 ಎಸ್ಇಎನ್ 2003, ಬೆಂಗಳೂರು, ದಿನಾಂಕ: 10ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಕೃಷ್ಣಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ಬಿ.ಎ. ಕುಟಿನೋ, ಐ.ಎ.ಎಸ್. ಆಡಳಿತಾಧಿಕಾರಿ, ಕಾಡಾ, ಬೆಳಗಾವಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಳಗಾವಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳಲ್ಲಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 588

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 97, ದಿನಾಂಕ: 17.6.1997.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 98, ದಿನಾಂಕ: 6.8.1998.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 99, ದಿನಾಂಕ: 17.6.1999.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2000, ದಿನಾಂಕ: 25.3.2000.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2001, ದಿನಾಂಕ: 25.2.2001.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2002, ದಿನಾಂಕ: 1.6.2002 ಹಾಗೂ ಸೇರ್ಪಡೆ ಆದೇಶ ದಿನಾಂಕ: 21.6.2002.
7) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2003, ದಿನಾಂಕ: 16.6.2003.
8) ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ: ಕಾಇ 44 ಸಿಎಲ್‌ಸಿ 2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 17.6.1997ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಒಂದು ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. | ಸಹಾಯಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ಗ್ರೂಪ್ 'ಡಿ' | 2 ಹುದ್ದೆಗಳು |

ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿರುತ್ತದೆ. ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 1.6.2002ರ ಆದೇಶ ಹಾಗೂ 21.6.2002 ರ ಸೇರ್ಪಡೆ ಆದೇಶದಲ್ಲಿ ಈ ಹುದ್ದೆಗಳ ಪೈಕಿ ಒಂದು ದಲಾಯತ್ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ. ಪ್ರಸ್ತುತ ಬಾಲ ಕಾರ್ಮಿಕ ಕೋಶದ ಉಳಿದ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ: 16.6.2004ಕ್ಕೆ ಮುಕ್ತಾಯಗೊಳ್ಳಲಿದೆ. ಆದರೆ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಕಡತದಲ್ಲಿ ಸದರಿ ಬಾಲ ಕಾರ್ಮಿಕ ಕೋಶವನ್ನು ಮುಂದುವರೆಸುವ ಅವಶ್ಯಕತೆ ಇರುವುದರಿಂದ ಈ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ 2007 ರವರೆಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 2004, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2004**

ಕರ್ನಾಟಕ ಸರ್ಕಾರಿ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 17.6.2004 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. | ಸಹಾಯಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 589 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

**ವಿಷಯ:** ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 6ನೇ ಮೇ 2004**

ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ಶಾಖೆಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಖೋಟಾ ವರ್ಗಾವಣೆ/ಖೋಟಾ ನೇಮಕಾತಿ ಆದೇಶಗಳನ್ನು ಮುಖ್ಯ ಮಂತ್ರಿಯವರ, ಸಚಿವರ ಹಾಗೂ ಪ್ರಧಾನ ಕಾರ್ಯದರ್ಶಿಗಳವರ ಆದೇಶವಿಲ್ಲದೇ ತನ್ನ ಹಂತದಲ್ಲೇ ಅಧಿಕಾರ ವ್ಯಾಪ್ತಿ ಮೀರಿ ಖೋಟಾ ಆದೇಶಗಳನ್ನು ಹೊರಡಿಸಿ ಅಧಿಕಾರ ದುರುಪಯೋಗಪಡಿಸಿಕೊಂಡ ದುರ್ನಡತೆಯು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಸರ್ಕಾರ ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 590 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಶ್ರೀ ಎಸ್.ಆರ್. ಕೊಳವಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಪ್ರಸ್ತುತ ಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಹಾಸನ ಇವರಿಗೆ ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಿಆಸುಇ 308 ಸಆಸೇ 2002, ದಿನಾಂಕ: 4.4.2003.

2) ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ ಇವರ ಮನವಿ ದಿನಾಂಕ: 5.1.2004.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಕೊಳವಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ, ಪ್ರಸ್ತುತ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಹಾಸನ ಇವರು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರದಲ್ಲಿ ವಿಶೇಷಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಮೇಲೆ ಓದಲಾದ ಅಧಿಸೂಚನೆ ದಿನಾಂಕ: 4.4.2003 ರಲ್ಲಿ ಇವರನ್ನು ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಯಲ್ಲಿ ವರ್ಗಾಯಿಸಿ ನೇಮಿಸಲಾಗಿದೆ. ಅಧಿಕಾರಿಯವರನ್ನು ದಿನಾಂಕ: 4.4.2003 ರಂದು ವರ್ಗಾಯಿಸಿ ನೇಮಕಾತಿ ನೀಡಲಾಗಿದ್ದರೂ ಸಹ ವರ್ಗಾಯಿಸಿದ ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗದೆ ದಿನಾಂಕ: 5.4.2003 ರಿಂದ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವರು.

ಅಧಿಕಾರಿಯವರು ವರ್ಗಾಯಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದಿರುವ ಬಗ್ಗೆ ಇವರಿಗೆ ಹಲವು ನೋಟೀಸುಗಳನ್ನು ನೀಡಿದ್ದರೂ ಸಹ ಉತ್ತರ ನೀಡದೇ ಹಾಗೂ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರು ಹಾಜರಾಗಿರುವರು.

ಶ್ರೀ ಆರ್.ಎಸ್. ಕೊಳವಿ, ಉಪ ಕಾರ್ಯದರ್ಶಿ ಇವರು ಮೇಲೆ ಓದಲಾದ ದಿನಾಂಕ: 5.1.2004ರ ಮನವಿಯಲ್ಲಿ ದಿನಾಂಕ: 5.1.2004 ರಂದು ಪೂರ್ವಾಹ್ನ ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಚಾರ್ಯರ ಹುದ್ದೆಯಲ್ಲಿ ಪ್ರಭಾರ ವಹಿಸಿಕೊಂಡಿರುವುದಾಗಿ ತಿಳಿಸಿ ಪ್ರಭಾರ ವರ್ಗಾವಣೆಯ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ ಇವರು ವರ್ಗಾಯಿಸಿದ ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 5.4.2003 ರಿಂದ 4.1.2004 ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಮೇರೆಗೆ ಇವರ ಗೈರು ಹಾಜರಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶ ಹೊರಡಿಸುವ ಬಗ್ಗೆ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1 ಸಆಠ 2004, ಬೆಂಗಳೂರು, ದಿನಾಂಕ: 4ನೇ ಮೇ 2004**

ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ ಇವರನ್ನು ವರ್ಗಾಯಿಸಿ ನೇಮಿಸಲಾದ ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 5.4.2003 ರಿಂದ 4.1.2004 ರವರೆಗೆ ಅನಧಿಕೃತವಾಗಿ ಗೈರು

ಹಾಜರಾಗಿರುವ ಬಗ್ಗೆ ದಿನಾಂಕ: 5.4.2003 ರಿಂದ 4.1.2004 ರವರೆಗೆ ಒಟ್ಟು 275 ದಿವಸಗಳ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ ಹಾಗೂ ಈ ಗೈರು ಹಾಜರಿ ಅವಧಿಯನ್ನು ಅವರ ಖಾತೆಯಲ್ಲಿ ಜಮೆ ಇರುವ 275 ದಿನಗಳು ಅರ್ಧ ವೇತನ ರಜೆಗೆ ಖರ್ಚು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 591

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

**ವಿಷಯ:** ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿವೃತ್ತ ತಹಶೀಲ್ದಾರ್ ಅಬ್ದುಲ್ ಸುಭಾನ್ ನಿವೃತ್ತ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು ಮತ್ತು ನರಸಿಂಹಲು ನಿವೃತ್ತ ಗ್ರಾಮ ಲೆಕ್ಕಿಗರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಕಂಇ 30 ಎಡಿಇ 2000, ದಿನಾಂಕ: 28.9.2001.

2) ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿವೃತ್ತ ತಹಶೀಲ್ದಾರ್ (ದಿನಾಂಕ: 27.10.2001).

3) ನರಸಿಂಹಲು ನಿವೃತ್ತ ಗ್ರಾಮ ಲೆಕ್ಕಿಗರು (ದಿನಾಂಕ: 24.10.2001) ಇವರುಗಳ ಉತ್ತರಗಳು.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರ ತಾಲ್ಲೂಕು ಕಛೇರಿಯ ತಹಶೀಲ್ದಾರ್, ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು ಹಾಗೂ ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ರಾಮನಗರ ತಾಲ್ಲೂಕು ಬಿಡದಿ ಹೋಬಳಿಯ ಶಾನುಮಂಗಲ, ಬಳೇವೀರನಹಳ್ಳಿ ಮತ್ತು ಅಬ್ಬನಕುಪ್ಪೆ ಗ್ರಾಮಗಳ ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಸರ್ಕಾರಿ ಜಮೀನುಗಳನ್ನು ಸಾಗುವಳಿ ಮಾಡುತ್ತಿದ್ದಂತಹ ರೈತರುಗಳಿಗೆ ಜಮೀನನ್ನು ಸಕ್ರಮೀಕರಣ ಮಾಡಿಕೊಳ್ಳಲು ನಿಗದಿತ ನಮೂನೆಗಳಲ್ಲಿ ಅರ್ಜಿ ಸಲ್ಲಿಸುವಂತೆ ಕೋರಿ ದಿನಾಂಕ: 19.9.91 ರವರೆಗೆ ಅರ್ಜಿ ಸಲ್ಲಿಸಲು ಅವಕಾಶ ನೀಡಲಾಗಿದ್ದರೂ ಸಲ್ಲಿಸದೇ ಕೆಲವೊಂದು ರೈತರುಗಳು ಅವಧಿ ನಂತರ ಸಲ್ಲಿಸಲಾದ ಅರ್ಜಿಗಳನ್ನು ಕಾನೂನು ಬಾಹಿರವಾಗಿ ವಹಿಗಳಲ್ಲಿ ನಮೂದಿಸಿ ಸಕ್ರಮಗೊಳಿಸಿ ಅವುಗಳು ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಲಿಗೆ ಸ್ವಾಧೀನವಾಗಲು ಸಹಕರಿಸಿ ಆ ಜಮೀನುಗಳಿಗೆ ಭೂ ಪರಿಹಾರಧನ ಪಾವತಿಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವ ಆರೋಪಕ್ಕಾಗಿ (1) ಶ್ರೀ ಎಂ.ಎನ್. ನರಸಿಂಹಯ್ಯಮೂರ್ತಿ, ನಿವೃತ್ತ ತಹಶೀಲ್ದಾರ್, (2) ಅಬ್ದುಲ್ ಸುಭಾನ್ ನಿವೃತ್ತ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು (3) ನರಸಿಂಹಲು ನಿವೃತ್ತ ಗ್ರಾಮ ಲೆಕ್ಕಿಗರು ಅವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 28.9.2001 ರ ನೋಟೀಸ್ ಜಾರಿ ಮಾಡುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿವೃತ್ತ ತಹಶೀಲ್ದಾರ್ ಮತ್ತು ನರಸಿಂಹಲು ನಿವೃತ್ತ ಗ್ರಾಮ ಲೆಕ್ಕಿಗರು ಅವರುಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 27.10.2001 ಮತ್ತು ದಿನಾಂಕ: 24.10.2001 ರಂದು ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ. ಅಬ್ದುಲ್ ಸುಭಾನ್ ನಿವೃತ್ತ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು ಅವರು ನೋಟೀಸ್‌ಗೆ ಉತ್ತರ ಸಲ್ಲಿಸಿರುವುದಿಲ್ಲ.

ಆರೋಪಿತ ನಿವೃತ್ತ ಅಧಿಕಾರಿ : ನೌಕರರ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 2001(2), ಬೆಂಗಳೂರು, ದಿನಾಂಕ: 21ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿವೃತ್ತ ತಹಶೀಲ್ದಾರ್, ಅಬ್ದುಲ್ ಸುಭಾನ್, ನಿವೃತ್ತ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು ಮತ್ತು ನರಸಿಂಹಲು ನಿವೃತ್ತ ಗ್ರಾಮ ಲೆಕ್ಕಿಗರು ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಉಳಿದ ನಿಬಂಧನೆಯು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 2001(1) ದಿನಾಂಕ: 21.5.2004 ರಲ್ಲಿರುವುದು ಇದಕ್ಕೂ ಅನ್ವಯಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಉಳಿದ ನಿಬಂಧನೆಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 2001(1) ದಿನಾಂಕ: 21.5.2004 ರಲ್ಲಿರುವಂತೆಯೇ ಇದಕ್ಕೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 592

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**INFORMATION TECHNOLOGY AND BIOTECHNOLOGY SECRETARIAT**

**Sub:** Approval of the project of M/s. Biocon Biopharmaceuticals Pvt. Ltd., 20th KM Hebbagodi, Electronic City Post, Hosur Road, Bangalore for setting up of Biopharma Manufacturing Unit.

**Read:** Proceedings of the 93rd High Level Committee (HLC) meeting held on 24.1.04.

**PREAMBLE:**

M/s. Biocon India Ltd., is one of India's largest Biotech companies primarily engaged in the manufacture of Active Pharmaceutical Ingredients and Speciality Enzymes. This project is being set up jointly with a Cuban Biotechnology Institution 'CIMAN, S.A., Cuban (CIMB)'. The company proposes to establish the project at plot no. 2, Bommasandra-Jigani Industrial Area, Bangalore with an investment of Rs. 126 crores. The company has already obtained 46.75 acres of land from KIADB in plot no. 2 of Bommasandra-Jigani Link Road. The company proposes to establish this project in this plot in an area of 4.57 acres and proposes to employ 118 persons.

In the proposal submitted to the 93rd High Level Committee Meeting held on 24.1.04, the Company had requested for various infrastructure facilities and the incentives and concessions from the Government. The HLC after detailed discussion of the project proposal of the said company has recommended certain infrastructure facilities, incentives and concessions to the project as stated in the proceedings cited at reference above.

Government have examined the recommendations of the HLC and hence issue the following orders.

**Government Order No. ITD 16 MDA 2004, Bangalore, Dated 4th June 2004**

In the circumstances explained in the preamble and in the light of the recommendations of the High Level Committee, Government are pleased to accord approval to M/s. Biocon Biopharmaceuticals Pvt. Ltd., for the establishment of their project for the manufacture of life saving drugs of Monoclonal Antibodies for the treatment of Head and Neck cancer, Human Erythroprotein for stimulating production of RBC's and Granulocatic Colony Stimulating factor for treating blood disorder most commonly associated with cancer patients and undergoing chemotherapy at the said location with the following facilities and incentives & concessions.

**INFRASTRUCTURE FACILITIES**

**LAND:** KIADB has already allotted 46.75 acres of land at Bommasandra-Jigani Link Road, Bommasandra Industrial Area, Anekal taluk, Bangalore out of which 4.57 acres of land would be utilised for this project.

**Water:** KIADB/BWSSB to consider supply of 3 lakhs 1trs per day. The company is advised to adopt the elements of the National Water Policy including water harvesting, recharging of ground water, complete recycling of water etc., The company is also advised to indicate their net requirement of water after taking into account the quantum of recycled water. The company should also clearly specify their requirement of treated water and fresh water to KIADB/BWSSB.

**Power:** BESCOM to consider supply of 1200 KVA power.

**Incentives & Concessions:** Incentives and concessions as per the Millennium Biotech Policy.

The company will approach the Karnataka State Pollution Control Board and the Department of Ecology and Environment to obtain clearances as per the provisions of the relevant Act and Rules, at the earliest.

The company should provide employment to local persons as per the policy of the Government.

By order and in the name of the Governor of Karnataka,

**K.M. Ananda**

Under Secretary to Government,

Department of Information Technology & Biotechnology.

PR-593

**Sub:** Approval of the project of M/s. Biocon India Pvt. Ltd., Hebbagodi, Electronic City Post, Hosur Road, Bangalore for expansion project for manufacture of Speciality Enzymes for food and pharmaceutical industry.

**Read:** Proceedings of the 93rd High Level Committee (HLC) meeting held on 24.1.04.

**PREAMBLE:**

M/s. Biocon India Ltd., is one of India's largest Biotech companies primarily engaged in the manufacture of Active Pharmaceutical Ingredients and Speciality Enzymes. Encouraged by the sustained demand for the products of the company, they intend to undertake substantial expansion of the project for the manufacture of Speciality Enzymes for food and pharmaceutical industry - Simvastatin, Pravastatin, Atorvastatin with an investment of Rs. 320 crores. The project is proposed to be implemented in 42.18 acres of land out of 46.30 acres of land allotted by KIADB at Bommasandra - Jigani Link Road, Bommasandra Industrial Area, Anekal taluk, Bangalore.

In the proposal submitted to the 93rd High Level Committee Meeting held on 24.01.2004, the company had requested for various infrastructure facilities and the incentives and concessions from the Government. The HLC after detailed discussion of the project proposal of the said company has

